

ಇತ್ತೀಚೆಗೆ ಕರ್ನಾಟಕ ರಾಜ್ಯ ನೂತನ ಮುಖ್ಯ ಮಂತ್ರಿಗಳಾದ ಶ್ರೀ ಹೆಚ್.ಡಿ. ದೇವೇಗೌಡರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.



15 ಜನವರಿ 1995 ಶ್ರೀ ಮಠದ ಮಹಾಚೇತನ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ 54ನೇ ಪುಣ್ಯಾರಾಧನೆ ಮತ್ತು ಗ್ರಾಮಾಂತರ ಬಸವಜಯಂತಿ ಸಮಾರೋಪ ಸಮಾರಂಭದಲ್ಲಿ ದಿವ್ಯ ಸಾನಿಧ್ಯವಹಿಸಿ ಶ್ರೀ ಶ್ರೀಗಳು ಆಶೀರ್ವಚನ ನೀಡುತ್ತಿದ್ದಾರೆ. ಶ್ರೀ ಆ.ರಾ. ಮಿತ್ರ, ಶ್ರೀ ಸೂರ್ಯನಾಥ ಕಾಮತ್ ಮತ್ತು ಶ್ರೀ ಬಸವರಾಜ ಮಲ್ಲಿಕಶೆಟ್ಟಿ ಇವರನ್ನು ಚಿತ್ರದಲ್ಲಿ ಕಾಣಬಹುದು.

# ಸಿದ್ಧಗಂಗಾ

ಸಂಪುಟ-31.　　ಸಂಚಿಕೆ-3　　ಮಾರ್ಚಿ-1995.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಲಿಂಗ ಶರಣರ ಜಾದು ಮಂಗಳಕರ ನೋಡು
ಮಂಗ ಮನಸಿನ ಹಿಡಿತ ಅದುವೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§　　§　　§

ಎಲ್ಲಿ ಬಸವನ ಬಯಲು ಎಲ್ಲಿ ಬಸವನ ಗಾಳಿ
ಎಲ್ಲಿ ಬಸವನ ತೇಜ ಅಲ್ಲಿರುವೆ । ನೀ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§　　§　　§

ಮಹಾತಾಯಿ ಶ್ರೀ ಕರುಳೆ ಮಹಾತಂದೆ ಶ್ರೀ ವಿದ್ಯೆ
ಮಹಾಲಿಂಗ ಶ್ರೀ ಬೆಳಕೆ ನನ್ನತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|

# ಶ್ರೀ ವಾಣಿ



## ಶೀಲ :

ಮಹಾ ಭಾರತದಲ್ಲಿ ಒಂದು ಮಾತು ಬರುತ್ತದೆ. ಬ್ರಾಹ್ಮಣ್ಯ ಏತರಿಂದ ಬರುತ್ತದೆ? ಎಂದು ಅದಕ್ಕೆ ಉತ್ತರವೂ ಅಲ್ಲಿಯೇ ಬರುತ್ತದೆ. ವಿದ್ಯೆ, ಕುಲ, ಅಧಿಕಾರ, ಹಣದಿಂದ ಬರುವುದಿಲ್ಲ ಬ್ರಾಹ್ಮಣ್ಯ. ಅದು ಬರುವುದು ಶೀಲ ಸಂಪತ್ತಿನಿಂದ ಎಂಬುದಾಗಿ ಹೇಳಿದೆ. ಜನಪದ ಸಾಹಿತ್ಯದಲ್ಲಿ "ಸೀತಾಳೆ ಕೊಡ ಪಾನ ಶಿವಮೊಗ್ಗಿ ಪಾವುಡ ಶೀಲವಂತವ್ವ ನನ್ನ ತಂಗಿ ಬರುವಾಗ ಶಿವ ತನ್ನ ಸದರ ಬಿಟ್ಟೆಳಿದಾನ" ಎಂಬ ಹಾಡೊಂದಿದೆ. 'ಶೀಲ'ಕ್ಕೆ ಶಿವನು ತಲೆಬಾಗುತ್ತಾನೆ. ಸದರ ಬಿಟ್ಟು ಎದ್ದು ನಿಲ್ಲುತ್ತಾನೆ. ಹೆಜ್ಜೆಯಿಟ್ಟು ಇಳಿದು ಬರುತ್ತಾನೆ. ದೇವರಿಗಿಂತ ಶೀಲದೊಡ್ಡದು ಅಂಥ ಶೀಲದ ಬಗ್ಗೆ ಬಸವಣ್ಣನವರು ಹೇಳಿದ ಸಪ್ತ ವಾಕ್ಯಗಳು ಸಾರ್ವಕಾಲಿಕ ಮೌಲ್ಯಗಳಾಗಿವೆ "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲ ಸಂಗಮ ದೇವನೊಲಿಸುವ ಪರಿ" ಶೀಲಕ್ಕೆ ಬೆಲೆಕೊಟ್ಟ ಶರಣರು ಶೀಲವಂತ, ಆಚಾರವಂತ ಸಮಾಜ ಕಟ್ಟಿದರು. ಶೀಲ ಭರಿತ ಸಂಸ್ಕೃತಿ ನಿರ್ಮಾಣ ಮಾಡಿದರು. ನಡೆಯಲ್ಲಿ ನುಡಿಯಲ್ಲಿ ಚಿಂತನೆಯಲ್ಲಿ ಶೀಲಸಂಪತ್ತನ್ನು ಗಳಿಸಿಟ್ಟರು. ಹುಟ್ಟಿನಿಂದ ಕೆಳಸ್ತರದಿಂದ ಬಂದವರೆಷ್ಟೋ ಜನ ತಮ್ಮ ಶೀಲನಿಷ್ಠೆಯಿಂದ ಹುಟ್ಟಿದ ಸಮಾಜಕ್ಕೆ ಹೆಸರುತಂದರು. ಸೆಟ್ಟಿಯೆಂಬೆನೆ ಸಿರಿಯಾಳನ ಎಂಬಂಥ ಮಾತುಗಳು ಹಿಂದೆ ಧ್ವನಿಸುವ ಮೌಲ್ಯ

ಶೀಲವಲ್ಲವೆ? ಮಾದರ ಚೆನ್ನ, ಡೋಹರಕಕ್ಕ, ಜೇಡರದಾಸಿಮಯ್ಯ ತಮ್ಮ ತಮ್ಮ ಶೀಲ ಪಾವಿತ್ರ್ಯತೆಯಿಂದ ಸಮಾಜ ಶೀಲರೂಪಿಸಿದರು. ಇಂದು ಮಠಾಧಿಪತಿಗಳು, ಕಾವಿಧಾರಿಗಳು ಇದನ್ನು ಗಮನಿಸಬೇಕು. ಕಾವಿಧರಿಸಿದಾಕ್ಷಣಕ್ಕೆ ಕಾಲು ಮುಟ್ಟಿ ನಮಸ್ಕರಿಸಿಕೊಳ್ಳುವ ಯೋಗ್ಯತೆ ತನಗೆ ಬಂದಿದೆಯೆ ಎಂದು ಚಿಂತಿಸಬೇಕು. ಸಾಧನೆಮಾಡಬೇಕು. ತನ್ನ ಕಾಲು ಮುಟ್ಟಿ ನಮಸ್ಕರಿಸುವ ಮುಗ್ಧ ಚೇತನಗಳ ಭಾವನೆಗೆ ತಕ್ಕ ಹಾಗೆ ನಡೆಯಬೇಕು. ಆತ್ಮಶೋಧನೆ ನಿರಂತರ ನಡೆಯಬೇಕು. 'ಅಂತರಂಗ ಬಹಿರಂಗ' ಪರೀಕ್ಷೆನಡೆದಿರಬೇಕು ಕಾವಿಧಾರಿಗಳೇ ಶೀಲ ಸಂಪನ್ನರಾಗದೇ ಹೋದರೆ ಸಾಮಾನ್ಯರಿಂದ ನಿರೀಕ್ಷಿಸುವುದಾದರೂ ಹೇಗೆ? ಕಾವಿ ನಿಗಿ ನಿಗಿ ಉರಿಯುವಕೆಂಡ. ಕಾಮವನ್ನು ಸುಟ್ಟುರುಹುವ ಸತ್ಯಾಗ್ನಿ, ಅಲ್ಲಿ ಕಾಮ ಸುಟ್ಟು ಭಸ್ಮವಾಗದ ಹೊರತು ಶೀಲ ಸೃಷ್ಟಿಯಾಗದು. ಶೀಲವಂತ ಸಮಾಜ ರಾಷ್ಟ್ರದ ನಿಜವಾದ ಆದಾಯ. ಒಂದು ಕಡೆ ರಾಜಾಜಿ ಹೇಳಿದ್ದಾರೆ. Not average income but average Charaeter is important' ಎಂದು. ಆದಾಯಬೇಕು. ಸರಾಸರಿ ಶೀಲಮುಖ್ಯವಾಗಿಬೇಕು.

[2-8-95 ರಂದು ಮುರಳೆಗವಿಮಠದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ]

## ತ್ರಿವಿಧ ದಾಸೋಹಿಗಳಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ 88ನೇ ಜನ್ಮದಿನೋತ್ಸವ ಮಹೋತ್ಸವಕ್ಕೆ ಭಕ್ತಿಪೂರ್ವಕ ಪ್ರಣಾಮಗಳು

ಸದ್ದು ಗದ್ದಲ ವಿರದ ಸಾಧನೆ
ಇಲ್ಲಿ ಗದ್ದುಗೆ ಏರಿದೆ
ಕಾಯಕವೆ ಕೈಲಾಸವೆನ್ನುವ
ಮಾತು ಕೃತಿಯೊಳು ಮೂಡಿದೆ
ಕಾವಿಯೊಡಿಗೆಯನುಟ್ಟು ನಭವೇ
ಹಸ್ತ ಕಿರಣವ ಚಾಚಿದೆ
ಎಲ್ಲ ನನ್ನವರೆನುವ ಭಾವದ
ಕರುಣೆಯೇ ಕಣ್‌ತೆರೆದಿದೆ

ಡಾ|| ಜಿ. ಎಸ್. ಶಿವರುದ್ರಪ್ಪ

**ಸಂಯುಕ್ತ ವಿದ್ಯಾರ್ಥಿ ಸಂಘ**

ಶ್ರೀ ಸಿದ್ಧಗಂಗಾಮಠ.

# ಶ್ರೀ ಸಿದ್ಧಲಿಂಗೇಶ್ವರ ವಚನ

ಗುರು ಪ್ರಸಾದಿಯಾದ ಬಳಿಕ
ವಾತ ಪಿತ್ಥ ಶ್ಲೇಷನೆಂಬ ತ್ರಿದೋಷವಿಲ್ಲದಿರಬೇಕು
ಲಿಂಗ ಪ್ರಸಾದಿಯಾದ ಬಳಿಕ
ಶೀತೋಷ್ಣಾದಿಗಳ ಭಯವಿಲ್ಲದಿರಬೇಕು
ಜಂಗಮ ಪ್ರಸಾದಿಯಾದ ಬಳಿಕ
ಆದಿ ವ್ಯಾಧಿಯಿಲ್ಲದಿರಬೇಕು
ಮಹಾ ಪ್ರಸಾದಿಯಾದ ಬಳಿಕ
ಮರಣ ವಿಲ್ಲದಿರಬೇಕು
ತಾಪತ್ರಯ ತನುವ ಪೀಡಿಸದನ್ನಕ್ಕರ
ಪ್ರಸಾದಿ ಪ್ರಸಾದಿ ಯೆಂದೇನೋ ಜಡರುಗಳಿರಾ ?
ಕೆಂಡವ ಇರುಹೆ ಮುತ್ತ ಬಲ್ಲುದೆ ?
ನೊಣ ಹಾದರೆ ಮದಸೊಕ್ಕಿದಾನೆಯ ಬರಿ ಮುರಿಯ ಬಲ್ಲುದೆ ?
ಪ್ರಸಾದಿಯ ಪ್ರಳಯ ಬಾಧೆಗಳ ಬಾಧಿಸಬಲ್ಲದೆ ?
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.

ಗುರು ಲಿಂಗ ಜಂಗಮರಿಗೆ ಅರ್ಪಿಸಿದ್ದು ಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದ ಎಂಬ ಹೆಸರನ್ನು ಪಡೆಯುವುದು. ಗುರುವಿನಿಂದ ಬಂದ ಶುದ್ಧ ಪ್ರಸಾದವನ್ನು ಸೇವಿಸುವವನು ವಾತ, ಪಿತ್ಥ, ಕಫ ಎಂಬ ಮೂರು ದೋಷಗಳಿಲ್ಲದವನಾಗುವನು. ಲಿಂಗದಿಂದ ಬಂದ ಪ್ರಸಾದವನ್ನು ಸೇವಿಸುವವನು ಶೀತ, ಉಷ್ಣ-ಮುಂತಾದವುಗಳ ಭಯಕ್ಕೆ ಗುರಿಯಾಗನು. ಜಂಗಮದಿಂದ ಬಂದ ಪ್ರಸಿದ್ಧ ಪ್ರಸಾದವನ್ನು ಸೇವಿಸುವವನು ಮಾನಸಿಕ ಹಾಗೂ ಶಾರೀರಿಕ ರೋಗವಿಲ್ಲದವನಾಗುವನು. ನಿಜವಾಗಿಯೂ ಮಹಾಪ್ರಸಾದಿಯಾದವನಿಗೆ ಮರಣವೆಂಬುದೇ ಇರುವುದಿಲ್ಲ. ಆಧ್ಯಾತ್ಮಿಕಾದಿ ತಾಪಗಳ ಪೀಡೆಗೊಳಪಟ್ಟವನು ಪ್ರಸಾದಿಯಾಗನು. ಕೆಂಡವನ್ನು ಇರುವೆಗಳು ಮುತ್ತುವುದು, ನೊಣ ಹಾದರೆ ಆನೆಯ ಸೊಂಡಿಲು ಮುರಿಯುವುದು ಎಷ್ಟು ಅಸಂಭವವೋ ಅಷ್ಟೆ ಪ್ರಸಾದಿಯನ್ನು ಬಾಧೆಗಳು ಬಾಧಿಸುವುದು ಅಸಂಭವ.

(ಕೃಪೆ:- ಷಟ್‌ಸ್ಥಲ ಜ್ಞಾನಸಾರಾಮೃತ– ಶ್ರೀ ತೋಂ. ಸಿ. ಕೈಂ. ಸೇವಾ ಸಂಘ, ಎಡೆಯೂರು ಗದಗ)

# ಸಿದ್ಧಗಂಗಾ ಮಾಸ ಪತ್ರಿಕೆ



## ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗ ಮಠದಿಂದ ಪ್ರಕಟವಾಗುತ್ತಿರುವ ಮಾ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶ ನದಲ್ಲಿ 30ನೇ ವರ್ಷಕ್ಕೆ ಪಾದಾರ್ಪಣ ಮಾಡಿದೆ. ತ್ರಿವಿಧ ದಾಸೋಹ ತತ್ವರ ಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಧ್ಯೇಯ ಸಾಧನೆಗಾಗಿ ನಾಡಿನ ಗಣ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಚಿಂತನ ಮುಂತಾದ ಲೇಖನಗಳನ್ನು ಸ್ವಾ ತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪು ಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ ರೂಪಾಂತರ ಲೇಖನಗಳಿಗೆ ಮೂಲ ಕೃತಿ ಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡ ಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.



**1–1–95 ರಿಂದ ಚಂದಾ ದರ**
ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

ಏಪ್ರಿಲ್ ಒಂದು ಮೂರ್ಖರ ದಿನ ಎಂಬ ಪ್ರತೀತಿ ಇದೆ. ಆದರೆ ಸಿದ್ಧಗಂಗೆಯ ಭಕ್ತಾದಿಗಳಿಗೆ, ಅಭಿಮಾನಿಗಳಿಗೆ, ಹಿತೈಷಿಗಳಿಗೆ, ಹಳೆಯ ವಿದ್ಯಾರ್ಥಿಗಳಿಗೆ ಪರಮ ಪವಿತ್ರವಾದ ದಿನ. ಸಿದ್ಧಗಂಗೆಯ ಶ್ರೀ ಗಿರಿಗೆ ಬೆಳಕಿನ ತಿಲಕವಿಟ್ಟ ಪುಣ್ಯ ಪುರುಷರ ಜನ್ಮದಿನ. ಕಾಯಕ ದಾಸೋಹ ತತ್ವಗಳಿಗೆ ಭಾಷ್ಯ ಬರೆದ ಕಾರಣ ಪುರುಷರನ್ನು ಭಕ್ತಿ ಶ್ರದ್ಧೆಗಳಿಂದ ಕೃತಜ್ಞತೆಗಳನ್ನು ಅರ್ಪಿಸುವ ದಿನ. ಮಣ್ಣಲ್ಲಿ ಮಣ್ಣಾಗಿ ಉಳ್ಳ-ವರ ಕಾಲ ಕಸವಾಗಿ ಬಾಳೊಂದು ಕಣ್ಣೀರ ಕಾಲುವೆಯಾಗಿ ಕಷ್ಟ ನಷ್ಟಗಳ ಕುಲುಮೆಯಲ್ಲಿ ಕರಕಾಗಿ ಹೋಗ ಬಹುದಾಗಿದ್ದ ಸಹಸ್ರ ಸಹಸ್ರ ಜೀವಗಳ ಬಾಳಿಗೆ "ಕರುಣಾಳು ಬೆಳಕಾಗಿ ಕೈ ಹಿಡಿದು ನಡೆಸುತ್ತ" ಬಂದ 'ಅನಿಮಿತ್ತ ಬಂಧು' ವನ್ನು ಆರಾಧಿಸುವ ದಿನ. "ವಿರಕ್ತ" ಶಬ್ದಕ್ಕೆ ಅರ್ಥ ಬರೆದ, ಶುದ್ಧ ಚಾರಿತ್ರ್ಯಕ್ಕೆ ತಾತ್ಪರ್ಯವಾದ ಕರ್ಮ-ಯೋಗಿಯನ್ನು ಗೌರವಿಸುವ ದಿನ. ಮಾನವೀಯತೆಯನ್ನೇ ಸದಾ ಪೂಜೆಯೆಂದೆ ನಿಷ್ಕಾಮ ನಿಷ್ಠೆಯಿಂದ ಅನುಸಂಧಾನ ಮಾಡುತ್ತ "ದೀಪದ ಹೆಜ್ಜೆ" ಗಳನ್ನಿಡುತ್ತ ನಡೆದಿರುವ "ನಡೆದಾಡುವ ಭಗವಂತ" ನೆಂದೇ ಆಸ್ತಿಕ ಬಂಧುಗಳ ಹೃನ್ಮನದಲ್ಲಿ ಬೆಳಗುತ್ತಿರುವ ಮಂಗಳ ಮೂರ್ತಿಯನ್ನು ಭಕ್ತಿ ಪುಷ್ಪಗಳಿಂದ ಅಲಂಕರಿಸಿ ಕಣ್ತುಂಬ ನೋಡುವ ಅವಿಸ್ಮರಣೀಯ ದಿನ. ಸಿದ್ಧಗಂಗಾ ಸಾಣೆಗೈತಂದ ಗಂಧ ಮೂರ್ತಿಯ "ಗುರುವಂದನ" ಪುಣ್ಯದಿನ.

ಶ್ರೀ ಸಿದ್ಧಗಂಗಾ ಗುರು ಪರಂಪರೆಯಲ್ಲಿ ಸುವರ್ಣ ಯುಗವನ್ನೇ ಸೃಷ್ಟಿಸಿದವರು ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಶಿವಯೋಗಿ ಶ್ರೀ ಉದ್ದಾನ ಸ್ವಾಮಿಗಳ ಕರ ಕಮಲ ಸಂಜಾತರಾಗಿ ಬಂದ ಪೂಜ್ಯರು ಪವಾಡಗಳನ್ನು ನಂಬದ ವಿಚಾರಯುಗದಲ್ಲಿ ಅದ್ಭುತ ಪವಾಡವನ್ನೇ ಮೆರೆದಿರುವ ಸಾಹಸಿಗಳು. ಶ್ರೀಗಳು ನಡೆಸಿರುವ ಪವಾಡ "ಸಹಜ ಶಿವಯೋಗ"ದ ಅಮೃತಫಲ. ಭಸ್ಮ ಘುಟಿಕೆ, ಗಡಿ-ಯಾರಗಳನ್ನು ಕೊಡಲಿಲ್ಲ ಶ್ರೀಗಳು. ಹಸಿದು ಬಂದ ಹೊಟ್ಟೆಗೆ ಪ್ರಸಾದ ನೀಡಿದರು. ಕತ್ತಲಲ್ಲಿದ್ದ ಬಡ ಗುಡಿಸಲಲ್ಲಿ ಒಂದು ದೀಪ ಹಚ್ಚಿದರು. ಪ್ರಾಕೃತಿಕವಾದದ್ದನ್ನು ಸಾಂಸ್ಕೃತಿಕ ಗೊಳಿಸಿದರು "ಹಳೆ ಬೇರು ಹೊಸ ಚಿಗುರು" ಮೇಳವಿಸಿದರು. ಬಸವಾದಿ ಪ್ರಮುಥರ ತತ್ವಗಳಿಗೆ ಪ್ರಯೋಗಶಾಲೆ ತೆರೆದರು. ದಿನ ನಿತ್ಯ ಸಹಸ್ರ ಸಹಸ್ರ ಜೀವಿಗಳಿಗೆ ಪ್ರಸಾದವಿಡುತ್ತ ಪ್ರಸಾದ ಮಹತ್ವ ಬಿತ್ತರಿಸಿದರು. ಪರಮ ಪೂಜ್ಯರು ಪದಾರ್ಥ ಜೀವನವನ್ನು ಪ್ರಸಾದ ಜೀವನವನ್ನಾಗಿ ಪರಿವರ್ತಿಸುತ್ತ ಸಾಗಿದ್ದಾರೆ. ತಮ್ಮ ಸೇವಾ ಜೀವನದ ಉದ್ದಕ್ಕೂ ಶ್ರೀಗಳು ನೆಡುತ್ತ ಬಂದಿರುವ ಸಾರ್ಥಕ್ಯದ ಸಂಕೇತ ಮೈಲಿಗಲ್ಲುಗಳು ಎಂಬತ್ತೇಳು ಮುಗಿದು ಎಂಬತ್ತೆಂಟರ ಮುಖ ಮಾಡಿವೆ. ಲೋಕ ಜೀವನಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡ ಪೂಜ್ಯ ರಂಥವರು ವಿರಳ. ಮಧ್ಯ ರಾತ್ರಿಯ ನಂತರ ಎರಡೂವರೆಗೆ ಏಳುವ ಕ್ಷಣದಿಂದ ಮುಂದಿನ ರಾತ್ರಿ ಹನ್ನೊಂದರವರೆಗೆ ನಿರಂತರವಾಗಿ ಪರಹಿತಕ್ಕಾಗಿ ದಣಿವರಿಯದೆ ದುಡಿಯುವ ತ್ಯಾಗ ಸಮರ್ಪಣೆಗಳಿಗೆ ಸಾಕಾರ

ವಾದ ಚೆಂಗಾವಿಯ ನೊಸಲ ವಿಭೂತಿಯ ಮೃದುಮೂರ್ತಿ ಸದುವಿನಯದ ಸದಾ-ಶಿವನ ಒಲುಮೆಯ "ಶಿವಕುಮಾರರ" ಬದುಕು ಯುಗದ ಅಪರೂಪದ ಉದಾಹರಣೆ. ಲೋಕದ ಚರಿತ್ರೆಯಲ್ಲಿ ಉಳಿದು ಬರುವ ಪವಿತ್ರ ನಿದರ್ಶನ. ಎಂದೇ ಪೂಜ್ಯರ ಜನ್ಮ ದಿನಾಚರಣೆ–ಗುರುವಂದನ.

"ಸಿದ್ಧಗಂಗಾ" ಎಂಬತ್ತೆಂಟಕ್ಕೆ ಪಾದಾರ್ಪಣ ಮಾಡುತ್ತಿರುವ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಭಕ್ತಿಪೂರ್ವಕ ನಮನಗಳನ್ನು ಅರ್ಪಿಸುತ್ತದೆ.

---

ಓಂ

ಏಪ್ರಿಲ್ 1, 1995 ಶ್ರೀ ಸಿದ್ಧಗಂಗೆಯ ಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು**

88 ನೇ ಸಂವತ್ಸರಕ್ಕೆ ಪಾದಾರ್ಪಣೆ ಮಾಡುತ್ತಿದ್ದಾರೆ. ಇದರ ಪುಣ್ಯ ನೆನಪಿಗಾಗಿ ನಾಡಿನ ಭಕ್ತ ಕೋಟಿ ಜನ್ಮದಿನೋತ್ಸವ–ಗುರುವಂದನಾ ಮಹೋತ್ಸವವನ್ನು 2–4–1995 ಏರ್ಪಡಿಸಿದೆ.

ಅಧ್ಯಕ್ಷತೆ : ಸುತ್ತೂರು ವೀರಸಿಂಹಾಸನಾಧೀಶ್ವರ

**ಶ್ರೀ ಶ್ರೀ ಶಿವರಾತ್ರಿದೇಶೀಕೇಂದ್ರ ಸ್ವಾಮಿಗಳು**

ಸುತ್ತೂರು ಮಠ, ಮೈಸೂರು.

ಉದ್ಘಾಟನೆ :

**ಶ್ರೀ ಹೆಚ್. ಡಿ. ದೇವೇಗೌಡರು**

ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ.

ಶ್ರೀ ಶ್ರೀಗಳ ಭಾವಚಿತ್ರ ಅನಾವರಣ :

**ಶ್ರೀ ಜೆ. ಹೆಚ್. ಪಟೇಲ್**

ಉಪ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ.

ಭಕ್ತಿ ಸಮರ್ಪಣೆ :

**ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು**

ಉತ್ತರಾಧಿಕಾರಿಗಳು, ಶ್ರೀ ಸಿದ್ಧಗಂಗಾ ಮಠ.

ಪೂಜ್ಯರಿಗೆ ನಾಡಿನ ಲಕ್ಷಾಂತರ ಮಂದಿ ಹಳೆಯ ವಿದ್ಯಾರ್ಥಿಗಳ ಪ್ರಣಾಮಗಳು.

**ಹಳೆಯ ವಿದ್ಯಾರ್ಥಿ ಸಂಘ,**

ಶ್ರೀ ಸಿದ್ಧಗಂಗಾ ಮಠ.

# ವಿಜ್ಞಾನಿಗಳ ದೃಷ್ಟಿಯಲ್ಲಿದೇವರು-೨

ಈ ವಿಶ್ವದ ಸೃಷ್ಟಿ, ಸ್ಥಿತಿ ಹಾಗೂ ಲಯಗಳಿಗೆ ಕಾರಣವಾದ ಮಹಾಶಕ್ತಿಯ ಬಗ್ಗೆ ಕೆಲವು ವಿಜ್ಞಾನಿಗಳ ಅಭಿಪ್ರಾಯವನ್ನು ಹಿಂದಿನ ಲೇಖನದಲ್ಲಿ ತಿಳಿಸಲಾಗಿದೆ. ಈಗ ಮತ್ತೆ ಕೆಲವು ವಿಜ್ಞಾನಿಗಳ ಅಭಿಪ್ರಾಯವನ್ನು ನೋಡೋಣ. ಭಾರತೀಯ ವಿಜ್ಞಾನಿಗಳಾದ ಶ್ರೀ ಜಗದೀಶಚಂದ್ರ ಬೋಸರು ಸಸ್ಯಗಳೂ ಸಹ ಮಾನವರಂತೆ ನೋವು ನಲಿವುಗಳನ್ನು ಅನುಭವಿಸಬಲ್ಲವು ಎಂಬುದನ್ನು ಕಂಡು ಹಿಡಿದು ಜಗತ್ತಿಗೆ ತೋರಿದರು. ಅವರಿಗೆ ನಮ್ಮ ಭಾರತೀಯ ಸಂಸ್ಕೃತಿಯ ವೇದ ಉಪನಿಷತ್ತುಗಳಲ್ಲಿ ಅಪಾರ ನಂಬಿಕೆ ಇತ್ತು. ಅವರು ದೈವದ ಆಸ್ತಿತ್ವದ ಬಗ್ಗೆ ಈ ರೀತಿ ನುಡಿದಿದ್ದಾರೆ. "It is forgotten that He, who sorrounded us with this ever evolving mystery of creation, the imeffable wonder that lies hidden in the microcosm of the dust particle, enclosing within its atomic form the mystery of the cosmos, has also implanted in us the desire to question and understand"

Dr. C. A. Battista-USA ರವರು Science leads basically to the search towards Knowing God in things and phenomena" ಎಂದಿದ್ದಾರೆ. ವಿಶ್ವದ ನಾನಾ ವಸ್ತುಗಳಲ್ಲಿ ಹಾಗೂ ನಿರಂತರವಾಗಿ ಕಾಣಬರುವ ವಿದ್ಯಮಾನಗಳಲ್ಲಿ ದೇವರನ್ನು ಅರಿಯುವ ಬಗ್ಗೆ ವಿಜ್ಞಾನವು ಮುಖ್ಯವಾಗಿ ನಮ್ಮನ್ನು ಕೊಂಡೊಯ್ಯುತ್ತಿದೆ ಎಂಬುದು ಅವರ ಅಭಿಪ್ರಾಯವಾಗಿದೆ.

ಅಮೇರಿಕಾದೇಶದ Friendship-7 ಎಂಬ ಗಗನ ನೌಕೆಯಲ್ಲಿ ಭೂಮಂಡಲವನ್ನು ಆನೇಕಬಾರಿ ಪ್ರದಕ್ಷಿಣೆಮಾಡಿ ವಿಶ್ವದ ಅತ್ಯಾಶ್ಚರ್ಯಕರ ಹಾಗೂ ಅತ್ಯದ್ಭುತ ಸಂಗತಿಗಳನ್ನು ಕಣ್ಣಾರೆಕಂಡ ಗಗನಯಾತ್ರಿ "ಜಾನ್‌ಗ್ಲೆನ್" ಎಂಬುವರು ತಮ್ಮ ಅನುಭವವನ್ನು ಈ ರೀತಿ ವರ್ಣಿಸಿದ್ದಾರೆ. " I experienced God's presence in the Vastness of space of the Universe and the Clockwise precision with which it moves. Wherever you look at the Universe, there is a plan, exactness and order from the smallest atomic structure to swirling galaxies of stars millions of

light years in diameter, all travelling in preseribed orbits in relation to one antoher. The plan evident in the Universe is the big thing that proves there is God with the skill and power to put all this in to orbit and keep it there"

ಈ ಶತಮಾನದ ಹೆಸರಾಂತ ಮತ್ತೊಬ್ಬ ವಿಜ್ಞಾನಿ Charles Lyell ಎಂಬಾತನ ಅನುಭವದ ಪ್ರಕಾರ ಈ ರೀತಿ ಹೇಳಿದ್ದಾನೆ. "In whatever direction we persue our researches, whether in time or in space, we discover everywhere the clear proofs of a creative Intelligence and of this foresight, wisdom and power" ಯಾವ ದಿಕ್ಕಿನಲ್ಲಿ ನಾವು ಸಂಶೋಧನೆಗಳನ್ನು ನಡೆಸಿದಾಗಲೂ, ವೇಳೆಯಲ್ಲಾಗಲಿ, ಅವಕಾಶದಲ್ಲಾಗಲೀ, ಎಲ್ಲಾ ಕಡೆಯೂ ಸೃಜನಾತ್ಮಕ ಬುದ್ಧಿವಂತಿಕೆಯುಳ್ಳ ದೂರಾಲೋಚನೆ ಅಲ್ಲದೆ ಅಷ್ಟೆ ತಿಳುವಳಿಕೆ ಹಾಗೂ ಮಹಾಶಕ್ತಿಯುಳ್ಳ ಅಗೋಚರ ಸತ್ಯ ಇರುವುದು ನಮ್ಮ ಅನುಭವಕ್ಕೆ ಖಚಿತವಾಗಿ ಗೊತ್ತಾಗಿದೆ ಎಂಬುದು ಅವರ ಅಭಿಪ್ರಾಯವಾಗಿದೆ.

Eddington ಎಂಬ ವಿಜ್ಞಾನಿಯವರ ಅಭಿಪ್ರಾಯ ಹೀಗಿದೆ. "The whole Universe appears like a great thought while atoms look like thoughts of a great mind". ಈ ಬ್ರಹ್ಮಾಂಡವು ಅದ್ಭುತ ಯೋಜನೆಯಂತೆ ಕಂಡುಬರುತ್ತಿದೆ–ಈ ವಿಶ್ವದ ರಚನೆಗೆ ಕಾರಣವಾದ ಪರಮಾಣುಗಳ ರಚನೆಯು ಮಹಾ ಪ್ರಜ್ಞೆಯ ಸಂಕಲ್ಪದಂತೆ ಕಂಡು ಬರುತ್ತಿವೆ ಎಂಬುದು ಇವರ ಅನುಭವ.

ಜೀವಶಾಸ್ತ್ರ ವಿಜ್ಞಾನಿಗಳಲ್ಲಿ ಪ್ರಮುಖರಾದ P. Paley ಎಂಬುವರು ವಿಶ್ವ ದಲ್ಲಿರುವ ಅಗೋಚರ ಶಕ್ತಿಯ ಬಗ್ಗೆ ಈ ರೀತಿ ಹೇಳಿದ್ದಾರೆ. "If anyone train of thinking be more desirable than another, it is that which regards the phenomena of Nature with a Constant reference to a supreme Intelligent Being" ಇವರ ಅಭಿಪ್ರಾಯದಲ್ಲಿಯೂ ಈ ಪ್ರಕೃತಿಯ ಆಗು ಹೋಗುಗಳಿಗೆ ಪ್ರಮುಖಕಾರಣವಾದ ಸರಿಸಾಟಿಯಿಲ್ಲದ ಮಹಾ ಪ್ರಜ್ಞಾವಂತಿಕೆಯು ಸತ್ಯವಾಗಿದೆ.

ಸ್ವಾಮಿ ವಿವೇಕಾನಂದರು ಅವರ ಕಾಲದಲ್ಲಿ ವಿಜ್ಞಾನದ ಬೆಳವಣಿಗೆ ಗಮನಿಸಿ ಈ ರೀತಿ ಹೇಳಿದ್ದಾರೆ. "Today science has come to realise that this magnificent and yet mysterious Universe Could not be the Product of blind, mechanical forces as it had Presumed. Its quest of truth is inevitably leading it to the Reality of an absolute Conscious, supremely intelligent principle as the " FIRST CAUSE" behind all phenomena in to which it has probed and discovered the Second Causes"

ಅತ್ಯದ್ಭುತವಾದ ಹಾಗೂ ಅತ್ಯಾಶ್ಚರ್ಯಕರವಾದ ಈ ವಿಶ್ವವು ಕೇವಲ ಆಕಸ್ಮಿಕವಾಗಿ ಕುರುಡುತನದಿಂದ ಯಾಂತ್ರಿಕವಾಗಿ ಸೃಷ್ಟಿಯಾದುದಲ್ಲ ವೆಂಬುವನ್ನು ಈಗ ವಿಜ್ಞಾನ ಅರಿತಿದೆ ವಿಜ್ಞಾನವು ಸಂಶೋಧನೆಯಿಂದ ಕಂಡು ಹಿಡಿಯುವ ಆವಿಷ್ಕಾರಗಳಿಗೆಲ್ಲಾ ಪ್ರಮುಖ ಕಾರಣ ಮತ್ತೊಂದು ಪ್ರಥಮ ಮಹಾ ಶಕ್ತಿ ಇದೆ ಎಂಬುದನ್ನು ಸೂಚಿಸುವ ದಿಕ್ಕಿಗೆ ನಮ್ಮನ್ನು ಕೊಂಡೊಯ್ಯುತ್ತಿದೆ ಎಂಬುದು ಶ್ರೀ ವಿವೇಕಾನಂದರ ಸ್ಪಷ್ಟ ಅಭಿಪ್ರಾಯ.

Max plank ಎಂಬುವರು ಈ ಅದ್ಭುತ ಶಕ್ತಿಯ ಇರುವಿಕೆಯ ಬಗ್ಗೆ ನೇರವಾಗಿ ಈ ರೀತಿ ಹೇಳಿದ್ದಾರೆ "While god is the starting point of the Ignorant, He is the Crown of Carrer of a scientist" ವಿಜ್ಞಾನವನ್ನರಿಯದ ಸಾಮಾನ್ಯ ಮನುಷ್ಯರು ಈ ಮಹಾ ಪ್ರಜ್ಞಾವಂತ ಶಕ್ತಿಗೆ ದೇವರೆಂದು ಕರೆದರೆ, ಇದು ವಿಜ್ಞಾನಿಗಳಿಗೆ ಮುಕುಟಪ್ರಾಯವಂತೆ ಎಂಬುದು ಇದರ ಅಭಿಪ್ರಾಯವಾಗಿದೆ.

Bohm's Theory and Chew's S-Matrix Theory reeognise that "Conscience may well be an essential aspect of the Unievrse that will have to be in a future theory of physical phenomena" ಈ ಬ್ರಹ್ಮಾಂಡದ ಭೌತಿಕ ಭವ್ಯ ಸ್ವರೂಪ ತಿಳಿಯಲು ಇನ್ನು ಮುಂದಿನ ಕಲ್ಪನೆಗಳಲ್ಲಿ ವಿಶ್ವದಲ್ಲಿ ಕಾಣ ಬರುವ ಮಹಾಶಕ್ತಿಯ ಸ್ವಪ್ರಜ್ಞತೆ (Consciousness)ಯನ್ನು ಅವಶ್ಯವಾಗಿ ಗಣನೆಗೆ ತಿಳಿದುಕೊಳ್ಳಬೇಕಾಗುತ್ತದೆ ಎಂಬುದು ಅವರ ಅಭಿಮತ. ಅಂದರೆ ಇಂತಹ ಒಂದು ಮಹಾ ಪ್ರಜ್ಞಾಶಕ್ತಿ ಈ ವಿಶ್ವದ ರಚನೆಗೆ ಕಾರಣವೆಂಬುದು ಅವರ ಸ್ಪಷ್ಟ ಅಭಿಪ್ರಾಯ.

ಈ ರೀತಿ ವಿಶ್ವದ ಪ್ರಖ್ಯಾತ ವಿಜ್ಞಾನಿಗಳ ಬಹುಮುಖ್ಯವಾದ ಹಾಗೂ ಸಂದೇಹ ವಿಲ್ಲದ ಅನುಭವಗಳನ್ನು ಅವರ ಮಾತುಗಳಲ್ಲಿಯೇ ತಿಳಿದಾಗ ಈ ಜಗತ್ತಿನ ಸಕಲ ಸೃಷ್ಟಿ, ಸ್ಥಿತಿ, ಹಾಗೂ ವಿನಾಶದ ಹಿಂದೆ ಅಗೋಚರವಾದ ಅಪಾರವಾದ ಶಕ್ತಿಯುಳ್ಳ ಅಸಾಮಾನ್ಯವಾದ ಪ್ರಜ್ಞಾವಂತಿಕೆಯುಳ್ಳ ಯಾವುದೋ ಒಂದು ತತ್ವ ಅಡಗಿದೆ ಎಂಬು ದನ್ನು ನಾವೆಲ್ಲಾ ಅರಿಯಬಹುದಾಗಿದೆ. ವಿಜ್ಞಾನಿಗಳು ಇದನ್ನು ದೇವರೆಂದು ಹೇಳದಿ ದ್ದರೂ ಅಂತಹ ಶಕ್ತಿ ಇದೇ ಎಂಬುದನ್ನು ಒಪ್ಪಿಕೊಳ್ಳುವ ಹಂತಕ್ಕೆ ಬಂದಿದ್ದಾರೆ. ಆದ್ದರಿಂದ ತಿಳಿದವರು ಈಗ physics is becoming Metaphysics ಎಂದು ಹೇಳುತ್ತಿದ್ದಾರೆ. ವಿಜ್ಞಾನಿಗಳು ಹೇಳುತ್ತಿರುವ ಈ ಮಹರ್ಾ ಪ್ರಜ್ಞಾವಂತಿಕೆ ಯುಳ್ಳ ತತ್ವವನ್ನೇ ನಮ್ಮ ಹಿಂದಿನವರು ದೇವರೆಂದು ಕರೆದರು. ಅಲ್ಲದೇ ಅವನ ಅಸ್ತಿ ತ್ವವನ್ನು ಸ್ವತಃ ತಮ್ಮ ಅನುಭವದಿಂದ ಸಾಕ್ಷಾತ್ಕರಿಸಿ ಕೊಂಡಿದ್ದರು. ಆದ್ದರಿಂದ ದೇವರು ಎಂಬುದು ಮೂಢರ ನಂಬಿಕೆಯೆಂದು ತಿಳಿದು ಸ್ವೇಚ್ಛೆಯಿಂದ ಅನುಚಿತ ವರ್ತ ನೆಗಳಲ್ಲಿ ತೊಡಗಿರುವ ನಮ್ಮಲ್ಲಿ ಅನೇಕರು ಈ ವಿಚಾರಗಳನ್ನು ಅರಿತು, ಈ ಬಗ್ಗೆ ಇನ್ನೂ ಹೆಚ್ಚಿನ ವಿಚಾರಗಳನ್ನು ವಿಜ್ಞಾನದ ಆವಿಷ್ಕಾರಗಳಿಂದ ತಿಳಿದು, ಹೊಸ ಹೊಸ ಸಂಶೋಧನೆಗಳನ್ನು ಅಭ್ಯಸಿಸಿ, ಆ ವಿಚಾರವಾಗಿ ಕೂಲಂಕುಷವಾಗಿ ವಿಮರ್ಶಿಸಿ, ತೆರೆದ ಮನಸ್ಸಿನಿಂದ ಆ ವಿಜ್ಞಾನಿಗಳ ಸ್ವಪ್ರಜ್ಞತೆ (consciousness) ನಮ್ಮ ಭಾಗದ ದೇವರೆಂದು ತಿಳಿಯಲು ಪ್ರಯತ್ನಿಸುವುದು ಜಗತ್ತಿನ ಒಳಿತಿನ ದೃಷ್ಟಿಯಿಂದ ಶುಭ ಸೂಚನೆಯಾಗಬಹುದಲ್ಲವೆ?

---

**ಹೆಚ್. ಎಸ್. ನರಸಿಂಹ ಜೀಯರ್,** ತಮುಕೂರು.

---

ಕುಲ ಎಷ್ಟು ಎಂದರೆ ಎರಡು ಕುಲ. ಅವಾವೆಂದೊಡೆ, ಭವಿ ಒಂದು ಕುಲ, ಭಕ್ತ ಒಂದು ಕುಲ. ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿಪ್ಪ ಭಕ್ತರ ಕುಲವನಾರಿಸಿದರೆ ಬಾರದಭವಂಗಳಲ್ಲಿ ಬಪ್ಪದು ತಪ್ಪದು. ನೀರಿಂದಾದ ಮುತ್ತು ಮರಳಿ ಉದಕವಪ್ಪುದೆ? ಆಕಾಶಕ್ಕೆ ಹಾರಿ ಹೋದ ಜ್ಯೋತಿ ಹಿಂದಕ್ಕೆ ಬಪ್ಪುದೇ? ಮೃತ್ತಿ ವಿನಿಂದಾದ ಮಡಕೆ ಮರಳಿ ಮಣ್ಣಪ್ಪುದೆ? ಮತ್ತೆ ವಾಮಮುನಿ ಹಿರಿಯ ಭಕ್ತರ ಮನೆಯ ಬಿನ್ನಹವ ಕೈಕೊಂಡು. ಕುಲಕಂಜಿ ಉಣಲೊಲ್ಲದೆ ಹೋದ ನಿಮಿತ್ತದಿಂದ ಹಾವಿನಹಾಳ ಕಲ್ಲಯ್ಯಗಳ ಮನೆಯಲ್ಲಿ ಶ್ವಾನನಾಗಿ ಹುಟ್ಟಲಿಲ್ಲವೇ? ಅದು ಕಾರಣ ಶಿವಭಕ್ತರೊಕ್ಕುಮಿಕ್ಕ ಪ್ರಸಾದವ ಕೊಳಬೇಕು ಎಂದಾತ ನಮ್ಮ ಶಾಂತ ಕೂಡಲ ಸಂಗಮದೇವ.

**ಬಸವಣ್ಣ**

---

# ನೈಜ ಸುಖ-ಸಂತೋಷ ಯಾವುದರಲ್ಲಿದೆ ?

"ಕೂಡಲ ಸಂಗಮದೇವಾ ನನಗೆ ನಿಮ್ಮ ನೆನೆವುದೇ ಚಿಂತೆ" ಎಂದು ಸದಾ ಶಿವನನ್ನೇ ಕುರಿತು ಧ್ಯಾನ ಸಂಕೀರ್ತನ ಮಾಡಿ ಆನಂದ ವಿಭೋರರಾಗುತ್ತಿದ್ದರು. ಬಸವಣ್ಣನವರು. ಆ ರೀತಿ ಸಂಕೀರ್ತನ ಮಾಡಲು-

ಎನ್ನಕಾಯವ ದಂಡಿಗೆಯ ಮಾಡಯ್ಯಾ ;
ಎನ್ನ ಶಿರವ ಸೋರೆಯ ಮಾಡಯ್ಯಾ ;
ಎನ್ನ ನರವ ತಂತಿಯ ಮಾಡಯ್ಯಾ ;
ಎನ್ನ ಬೆರಳ ಕಡ್ಡಿಯ ಮಾಡಯ್ಯಾ ; ಬತ್ತೀಸ ರಾಗವ ಹಾಡಯ್ಯಾ ;
ಉರದಲೊತ್ತಿ ಬಾರಿಸು, ಕೂಡಲ ಸಂಗಮ ದೇವಾ.

ಎಂದು ಬೇಡಿಕೊಳ್ಳುತ್ತಾ :-

ತಾಳಮಾನ ಸರಿಸವನರಿಯೆ ; ಓಜೆ ಬಜಾವಣೆಯ ಲೆಕ್ಕವನರಿಯೆ !
ಅಮೃತಗಣ ದೇವಗಣವನರಿಯೆ !
ಕೂಡಲ ಸಂಗಮ ದೇವಾ, ನಿನಗೆ ಕೇಡಿಲ್ಲವಾಗಿ
ಅನುವೊಲಿದಂತೆ ಹಾಡುವೆ

ಎಂದು ಶಿವಸಂಕೀರ್ತನದಲ್ಲಿ ತೊಡಗಿರುತ್ತಿದ್ದರು ಬಸವಣ್ಣನವರು. ಹೀಗೇಕೆ ಅವರು ಪರಶಿವನನ್ನೇ ಕುರಿತು ಧ್ಯಾನಿಸಲು ಚಿಂತಿಸುತ್ತಿದ್ದರು ? ಸಂಕೀರ್ತನ ಮಾಡುತ್ತಿದ್ದರು ? ಯಾವ ಕಾರಣಕ್ಕಾಗಿ ಅಥವಾ ಯಾವ ಸೌಭಾಗ್ಯಕ್ಕಾಗಿ ಅವರು ಹೀಗೆ ಶಿವನನ್ನೇ ನೆನೆವ ಚಿಂತೆ ಕಟ್ಟಿಕೊಂಡರು ? ಎಂಬುದನ್ನು ಸ್ವಲ್ಪ ಹೊತ್ತು ಏಕಾಗ್ರರಾಗಿ ಯೋಚಿಸಿದರೆ ನಮಗೆ ಉತ್ತರ ಸಿಗದಿರಲಾರದು.

ಲೋಕದಲ್ಲಿ ಪ್ರತಿಯೊಬ್ಬರು ತಮಗೆ ಸುಖ ಸಂತೋಷ ಬೇಕು ಎಂದು ಯಾವಾಗಲೂ ತಾವು ಬಯಸುವ ಆ ಸುಖ-ಸಂತೋಷಕ್ಕಾಗಿ ಹಾತೊರೆಯುತ್ತಿರುವುದು ಸರ್ವೇ ಸಾಮಾನ್ಯ. ಸಂಸಾರ ನಿಮಗ್ನರಾದ ನಾವು ಆ ಸಂಸಾರದಲ್ಲಿ ಸುಖವನ್ನು ಅರಸಲು ಹಾಗೂ ಅದನ್ನು ದೊರಕಿಸಲು ಏನೇನೆಲ್ಲವನ್ನು ಮಾಡುತ್ತಿರುವೆವು. ಈ ಸಂಸಾರದಲ್ಲಿ ಸುಖ-ಸಂತೋಷ ಹೆಣ್ಣು, ಹೊನ್ನು, ಮಣ್ಣಿನಲ್ಲಿದೆ ಎಂದು ಯೋಚಿಸಿ, ನಮ್ಮ ಯೋಚನೆ ಹೊಳೆದತ್ತ ನಾವು ಮುನ್ನುಗ್ಗುತ್ತಿರುತ್ತೇವೆ. ಹೀಗಾಗಿ ಅಧಿಕಾರವೇ ಸುಖವೆಂದು ಭಾವಿಸುವವರು ಕೆಲವರು, ಲೂಟಿ, ದರೋಡೆ ಮಾಡುವುದು ಸುಖವೆಂದಿರುವವರು ಕೆಲವರು, ಹೆಂಡ, ಸಾರಾಯಿ ಕುಡಿಯುವುದೇ ಸುಖ ಸಂತೋಷದ ಬುನಾದಿಯೆಂದು ಇನ್ನು ಕೆಲವರು, ಸಿನೇಮಾದಿ ಮನರಂಜನೆಯೇ ಸುಖವೆಂದು ಮತ್ತೆ ಕೆಲವರು,ಹೇರಳ ಹಣ ಸಂಪಾದನೆಯೇ ಸುಖವೆಂದು ಕೆಲವರು, ಹೀಗೆ ಒಬ್ಬೊಬ್ಬರೂ ಅವರವರ

ಮನೋಭಾವಕ್ಕೆ ತಕ್ಕಂತೆ ಯಾವುದೋ ಒಂದನ್ನು ಸುಖವೆಂದು ಭಾವಿಸಿ, ಅದನ್ನು ಪಡೆಯಲು ಮೋಸ, ವಂಚನೆ, ಕಪಟ, ಕಲಹ, ದೊಂಬಿ, ಲೂಟಿ, ದರೋಡೆ, ಏನೇ ಆಗಲಿ ಮಾಡಲು ಹಿಂಜರಿಯದೆ ಮುನ್ನುಗ್ಗಿ ಪರಸ್ಪರ ಪೈಪೋಟಿ ನಡೆಸುತ್ತಿರುತ್ತಾರೆ. ಒಟ್ಟಿನಲ್ಲಿ ಲೋಕ ಏನೆಲ್ಲಾ ವ್ಯಾಪಾರ ಮಾಡುವುದೂ ಸುಖ ಪ್ರಾಪ್ತಿಗಾಗಿ. ಅದಕ್ಕಾಗಿ ಹೆಣವಾಗುವವರೆಗೂ ಹೆಣಗಾಡುತ್ತಿರುತ್ತಾರೆ. ಇಷ್ಟಾದರೂ ಸುಖ ದೊರಕೀತೇ? ಎಂದು ಪಶ್ನಿಸಿದರು. ಕೊನೆಗೊ ತನಗೆ ಸುಖವಿಲ್ಲ, ಸುಖ ಸಿಗಲಿಲ್ಲವೆಂಬ ಉತ್ತರವೇ ಎಲ್ಲರಿಂದಲೂ ದೊರಕೀತು. ಅಷ್ಟೇ ಅಲ್ಲ ಸುಖಕ್ಕಿಂತ ಇನ್ನೂ ಹೆಚ್ಚಿನ ಕಷ್ಟವೇ ಅನುಭವಿಸಬೇಕಾದೀತು ಹೀಗಾಗಿ "ಎಂದೋ ಸಂಸಾರದ ದ್ಮಂದುಗೆ ಹಿಂಗುವುದು? ಎಂದೋ ಮನದಲ್ಲಿ ಪರಿಣಾಮವಹುದೆನಗೆಂದೋ? ಕೂಡಲಸಂಗಮ ದೇವಾ, ಇನ್ನೆಂದೋ ಪರಮ ಸಂತೋಷ ವಹುದೆನಗೆಂದೋ" ಎಂದು ಪರಿತಪಿಸುವಂತಾಗುವುದೇ ಹೊರತು ಸಂಸಾರದಿಂದ ಸುಖ ಪ್ರಾಪ್ತಿಯೆಂಬುದು ಮರಳಿನಲ್ಲಿ ಎಣ್ಣೆ ತೆಗೆಯಲು ಶ್ರಮಿಸುವಂತೆ ವ್ಯರ್ಥ ಪ್ರಯಾಸವಲ್ಲದೆ ಪರಮ ಸಂತೋಷ ಎದೆಂದೊ ದೊರಕದು. ಏನೇನೆಲ್ಲ ಒಳಿತಾದುದು ಎಂದು ಕಂಡು ಅದನ್ನು ಬಯಸಿದರೆ, ಅದು ಕೈಗೆ ಎಟಕುವಂತಹದ್ದಲ್ಲ. ಶಿವ ಕರುಣೆಯಾದಲ್ಲಿ ಮಾತ್ರ ಎಲ್ಲವೂ ದೊರಕುವುದು.

ಲೇಸ ಕಂಡು ಮನಬಯಸಿ ಬಯಸಿ ಆಶೆ ಮಾಡಿದೊಡಿಲ್ಲ ಕಂಡಯ್ಯಾ!
ತಾಳಿಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯಾ!
ಕೂಡಲ ಸಂಗಮದೇವಾ;
ಕೇಳಯ್ಯಾ, ನೀವೀವ ಕಾಲಕ್ಕಲ್ಲದಿಲ್ಲ ಕಂಡಯ್ಯಾ!

ಹೀಗಿರುವಾಗ ಏನೇನೆಲ್ಲ ಬೇಕೆಂದು ಚಡಪಡಿಸಿ ಹೆಣಗುವುದರಲ್ಲಿ ಅರ್ಥವಿಲ್ಲ. ಇದರಿಂದ ಸುಖದ ಬದಲು ದುಃಖವೇ ಪ್ರಾಪ್ತಿ ಎಂಬದು ಖಚಿತ. ಇಷ್ಟಿದ್ದರೂ ಅಂಟಿಕೊಂಡ ಯಾವ ಗೀಳು ಇದೆಯೋ ಅದು "ಆಸತ್ತೆನಲಸಿದೆನೆಂದೊಡೆ ಮಾಣದು; ಬೇಸತ್ತೆ ಬೆಂಬಿದ್ದೆನೆಂದೊಡೆ ಮಾಣದು, ಏವೆನೇವೆನೆಂದೊಡೆ ಮಾಣದು, ಕಾಯದ ಕರ್ಮದ ಫಲಭೋಗವು!" ಆದರೆ ಇದಕ್ಕೆ ಪರಿಹಾರ ಉಂಟು "ಸಟೆ ಇಲ್ಲದಂತೆ, ಪ್ರಪಂಚವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ!" ಎಂದು ಶಿವನಲ್ಲಿ ಯಾಚಿಸಿ, ಆ ರೀತಿ ನಡೆಯಲು ಯತ್ನಿಸಬೇಕು.

ತನ್ನ ತನುಮನಗಳಿಂದ ನಿಷ್ಠನಾಗಿ ಶ್ರಮಿಸಿದರೂ ಸುಖ ಸಿಗಲಿಲ್ಲವೆಂದು ಗೊಣಗುವಂತಾಗುತ್ತದೆ ಏಕೆ? ಶ್ರಮಿಸಿದರೂ ಸುಖ ಸಿಗಲಿಲ್ಲವೆಂದು ಎಲ್ಲರೂ ವಟಗುಟ್ಟುವಂತಾಗುತ್ತದೆಯೆಂದಾದರೆ ಶ್ರಮದಲ್ಲಿ ಏನೋ ದೋಷವಿರಬೇಕು ಅಥವಾ ಪಡೆಯಬೇಕಾದ ವಿಷಯದ ಬಗ್ಗೆ ಪೂರ್ಣ ಮಾಹಿತಿ ಇಲ್ಲದಿರುವ ದೋಷವಿರಬೇಕು ಎಂಬುದು ನಿಶ್ಚಿತ, ಸ್ಪಷ್ಟ. ಹೌದು, ನಾವು ಶ್ರಮಿಸುತ್ತಿರುವುದೇನೋ ನಿಜ. ಆದರೆ ಯಾವುದರ

ಬಗ್ಗೆ ಶ್ರಮಿಸ ಬೇಕೆಂಬುದರ ವಿಷಯದಲ್ಲಿ ಮಾತ್ರ ನಮ್ಮ ಮಾಹಿತಿ ಅಪೂರ್ಣ. ಸುಖದ ಮರೀಚಿಕೆಯ ಬೆನ್ನು ಹತ್ತಿ ಪ್ರತಿಯೊಬ್ಬನೂ ಧಾವಂತ ಪಡುತ್ತಿದ್ದಾನೆಯೇ ಹೊರತು, ಅನುಭವಿಸಬೇಕೆಂದಿರುವ ನೈಜಸುಖ ಪಡೆಯುತ್ತಿಲ್ಲ. ಹಾಗಾದರೆ ನೈಜಸುಖ ಅನುಭವಿಸಲು ನಾವು ಯಾವುದರ ಬಗ್ಗೆ ಶ್ರಮಿಸಬೇಕು? ಅದರೆ ನೈಜಸುಖ ಯಾವು ದರಿಂದ ಪ್ರಾಪ್ತವಾಗುವುದು? ಎಂಬುದನ್ನು ಮೊತ್ತ ಮೊದಲು ಮನವರಿಕೆ ಮಾಡಿ ಕೊಳ್ಳಬೇಕಾಗಿದೆ.

ಬೇಕು, ಬೇಕು, ಬೇಕು ಎಂದು ಸದಾ ಹಾತೊರೆಯುವುದೇ ಕಷ್ಟಕ್ಕೆ ಕಾರಣ ವಾಗಿರುತ್ತದೆ; ಹಾಗೆ ಬೇಕೆಂಬುದು ದೊರಕಿದರೆ ಮತ್ತು ಬೇಕೆಂಬ ಆಸೆ ಬಲಿಯು ವುದೇ ಹೊರತು ಸುಖ ಶಾಂತಿ ದೊರಕುವುದಿಲ್ಲ. ಅದರಲ್ಲಿಯೂ ಬೇಕೆಂದುದು ದೊರಕಿ ಮರಳಿ ಕಳೆದು ಹೋದರೆ ಆಗುವ ದುಃಖ ಅಸದಳ. ಅದರ ಬದಲು ಯಾವು ದನ್ನು ಬೇಕೆಂದು ಹಾರೈಸದೆ ಬೇಕೆಂದಿರುವುದನ್ನು ನಾವಾಗಿ ತ್ಯಜಿಸಿದರೆ, ಆದರಿಂದ ದೊರಕುವ ಸುಖ ಅಪಾರ. ಆದ್ದರಿಂದಲೇ ನೀರವ ನಿಶ್ಶಬ್ದ ಬೆಳದಿಂಗಳ ರಾತ್ರಿಯಲ್ಲಿ ಗಂಗಾತೀರದ ಉಸುಕಿನ ಮೇಲೆ ಸಂಸಾರದ ಜಂಜಡವನ್ನೆಲ್ಲ ಮರೆತು ಆರ್ತಸ್ವರ ದಿಂದ ಶಿವ ಶಿವಾ ಎಂದು ಶಿವನಧ್ಯಾನದಲ್ಲಿಯೇ ಯಾವಾಗ ಮಗ್ನರಾದೇವು? ಹಾಗೂ ನಮ್ಮ ನೇತ್ರಗಳನ್ನು ಆನಂದಾಶ್ರುಗಳಿಂದ ಯಾವಾಗ ಪರಿಪೂರ್ಣಗೊಳಿಸೇವು? ಎಂಬುದಾಗಿ ಭರ್ತೃಹರಿ ಎಲ್ಲ ಜಂಜಡಗಳನ್ನು ತ್ಯಜಿಸಿ ಶಿವಧ್ಯಾನದಲ್ಲಿ ತೊಡಗುವುದ ರಿಂದಲೇ ಸುಖ-ಆನಂದ ಲಭಿಸುವುದೆಂದು ಘೋಷಿಸಿದ್ದಾನೆ.

ಶಿವಧ್ಯಾನದಿಂದ ಶಿವನೊಲವು; ಶಿವನೊಲಿವಿನಿಂದ ನಮ್ಮ ಬದುಕಿನಲ್ಲಿ ನಲಿವು ಈ ನಂಬಿಕೆ ಫಲ ನೀಡುತ್ತದೆ. ಆದರೆ ಇದನ್ನು "ನಂಬರು, ನೆಚ್ಚರು, ಬರಿದೆ ಕರೆವರು! ನಂಬಲರಿಯರೀ ಲೋಕದ ಮನುಜರು! ನಂಬಿಕರೆದೊಡೆ 'ಓ' ಎನ್ನನೆ ಶಿವನು? ನಂಬದೆ, ನಚ್ಚದೆ ಬರಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ ನಮ್ಮ ಕೂಡಲ ಸಂಗಮ ದೇವ". ನಂಬಿಕೆಯಿಲ್ಲದೆ ಸಂಕಟ ಬಂದಾಗ ವೆಂಕಟರಮಣ ವೆಂಬತೆಯು ಯಾರೋ ಹೇಳಿದ್ದಾರೆ. ಆದ್ದರಿಂದ ಶಿವನಾಮಸ್ಮರಣೆ ಮಾಡಬೇಕೆಂದೋ ಬರಿದೆ ಶಿವಧ್ಯಾನ ಮಾಡಿ ದರೆ ಒಲವು ನಲಿವು ದೊರಕದು. ಅದರ ವಿಷಯದಲ್ಲಿ ದೃಢವಾದ ನಂಬಿಕೆ ಇರಬೇಕು. ಆ ನಂಬಿಕೆ ಹೇಗಿರಬೇಕು? ಯಾವರೀತಿಯದ್ದಾಗಿರಬೇಕು, ಕೇಳಿ.

ನೆರೆ ನಂಬೋ ನೆರೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ;
ನೆರೆ ನಂಬೋ ನೆರೆ ನಂಬೋ ದಾಸ ದುಗ್ಗಳೆಯಂತೆ;
ನೆರೆ ನಂಬೋ ನೆರೆ ನಂಬೋ ಸಿರಿಯಾಳ ಚಂಗಳೆಯಂತೆ;
ನೆರೆ ನಂಬೋ ನೆರೆ ನಂಬೋ ಸಿಂಧು ಬಲ್ಲಾಳನಂತೆ;
ನಂಬಿದೆಯಾದೊಡೆ ತನ್ನ ನೀವ ಕೂಡಲ ಸಂಗಮದೇವ.

ಈ ರೀತಿ ಶಿವನಲ್ಲಿ ನಂಬಿಕೆಯಿಟ್ಟು ವರ್ತಿಸುವುದರಿಂದ ಮನಕ್ಕೆ ಶಾಂತಿ–ಸಂತೋಷ ಆದ್ದರಿಂದ ಸುಖ ವಿರುವುದು ಮಾನಸಿಕ ಶಾಂತಿಯಲ್ಲೇ ಹೊರತು ಭೌತಿಕ ವಸ್ತು ಗಳಿಂದಲ್ಲ ವೆಂಬುದನ್ನು ಮೊದಲು ಅರಿತುಕೊಳ್ಳಬೇಕು. ಅಂದರೆ ಸುಖದ ಬುನಾ ಯಿರುವುದು ಮಾನಸಿಕ ಶಾಂತಿಯಲ್ಲಿ. ಎಲ್ಲಿಯವರೆಗೆ ಮನಸ್ಸಿಗೆ ಶಾಂತಿ ತೃಪ್ತಿಯಿಲ್ಲವೋ ಅಲ್ಲಿಯ ತನಕ ಎಷ್ಟೇ ಹಣಗಾಸಿ, ಏನೇ ಸಂಪಾದಿಸಿದರೂ ಸುಖವೆಂಬುದು ಕನಸಿ ಗಂಟೆಯೇ ಹೊರತು ವಾಸ್ತವಿಕತೆಯಾಗದು.

ಸುಖ ಸಂತೋಷ ಬೇಕೆಂಬ ಈಬಯಕೆ ಇಂದು ನಿನ್ನೆಯದ್ದಲ್ಲ : ಅನಾದಿಕಾಲದ್ದು

"ಸುಖಾಯಕರ್ಮಾಣಿ ಕರೋತಿ ಲೋಕೋ
ನತೈಃ ಸುಖಂವಾನ್ಯದುಪಾರಮಂ ವಾ।
ವಿಂದೇತ, ಭೂಯಸ್ತತ ಏವಂದು:ಖಂ
ಯದತ್ರಯುಕ್ತಂ ಭಗವಾನ್ ವದೇನ್ನಃ" (ಭಾಗವತ 3-5-2)

ಲೋಕದಜನರು ಸುಖವು ಬರಲೆಂದು ಕರ್ಮಗಳನ್ನು ಮಾಡುತ್ತಾರೆ ಆದರೆ ಕರ್ಮದಿಂ ಸುಖವಿಲ್ಲ. ಕರ್ಮಕರಣಕಪ್ಪವೊಂದುಳಿಯುವುದಷ್ಟೇ ಅಲ್ಲ ಮತ್ತೆ ದುಃಖವನ್ನು ಹೊಂ ತ್ತಾರೆ. ಪೂಜ್ಯನೇ, ಸುಖಪ್ರಾಪ್ತಿ ದುಃಖ ನಿವೃತ್ತಿಗಳಿಗೆ ಯೋಗ್ಯವಾದ ಉಪಾಯ ಯಾವುದು ? ದಯಮಾಡಿ ತಿಳಿಸು ಎಂಬುದು ವಿದುರನ ಪ್ರಶ್ನೆ. ಇದು ವಿದುರನೊಬ್ಬ ಪ್ರಶ್ನೆಯಲ್ಲ ಸುಖಕ್ಕಾಗಿ ಹಾತೂರೆಯುವವರೆಲ್ಲರ ಪ್ರಶ್ನೆ. ಇದಕ್ಕೆ ಮೈತ್ರೇಯರ ನೀಡಿದ ಉತ್ತರ

ಏಕ್ತಾನಲಾಭಂವಚಸೋऽನುಪುಂಸಾಂ
ಸುಶ್ಲೋಕ ಮೌಳೇ: ಗುಣವಾದಮಾಹು:।
ಶ್ರುತೇಶ್ವ ವಿದ್ವದ್ಭಿ: ಉಪಾಕೃತಾಯಾಂ
ಕಥಾಸುಧಾಯಾಂ ಉಪಸಂಪ್ರಯೋಗಂ॥ (ಭಾಗವತ 3 7 3 7)

ಒಬ್ಬನ ವಾಕ್‌ಶಕ್ತಿಯನುಪಡೆದು ಹುಟ್ಟಿದುದರ ದೊಡ್ಡಲಾಭವೆಂದರೆ ಭಗವಂತನ ಗುಣಗಾನ ಮಾಡುವುದು. ಒಬ್ಬನುಕಿವಿಗಳನ್ನು ಪಡೆದು ಹುಟ್ಟಿದ್ದಕ್ಕೆ ಆ ಭಗವದ್ಗುಣ ಗಳನ್ನು ಕೇಳುವುದೇದೊಡ್ಡಲಾಭ, ಇದೇ ನಿಜವಾದ ಲಾಭ. ದೇವರ ಗುಣಗಾನಕ್ಕೆ ನಮಗೆ ಯೋಗ್ಯತೆ ಇಲ್ಲವೆನಿಸಿದರೂ ಅದನ್ನು ಪಡೆದ ಜ್ಞಾನಿಗಳ ವಾಕ್ಕಿನಲ್ಲಾದರೂ ಅದನ್ನು ಕೇಳಿ ಸುಖಪಡಬೇಡವೇ? ಅಂದರೆ ಶ್ರವಣೇಂದ್ರಿಯಗಳನ್ನು ನಾವು ಪಡೆದುದಕ್ಕೆ ಫಲವೆಂದರೆ ಜ್ಞಾನಿಗಳವ್ಯಾಖ್ಯಾನ ಮಾಡುವಾಗ ಪರಮಾತ್ಮನ ಸುಧಾಪಾನವೇಹೊರತು ಅನ್ಯವಲ್ಲ. ಚಕ್ಷುರಾದಿಗಳು ಅವನನ್ನು ಸೇವಿಸಿದರೇನೇ ಚರಿತಾರ್ಥವಾಗುವುವು ಎಂಬ ಉತ್ತರದಿಂದ ತಿಳಿದು ಬರುವುದಲ್ಲವೇ-ಸುಖವೆಲ್ಲಿದೆ? ಯಾವುದರಲ್ಲಿದೆ ಎಂಬುದು.

ಭಗವದ್ ಚಿಂತನೆಯಲ್ಲಿ ಸುಖವಿದೆ ಎಂಬ ಮೈತ್ರೇಯರ ಉತ್ತರ ಚಿಂತನೀಯವಾಗಿದೆ. ಭಗವದ್ ಚಿಂತನೆಯೆಂಬುದು ಕಾಯೋವಾಚಾ ಮನಸಾಭಗವಂತನ ಭಾವನೆಯಿಂದ ನಾವು ಕೂಡಿರಬೇಕೆಂಬುದೇ ಆಗಿದೆ. ಪರಿಪೂರ್ಣವೂ ಪರಿಶುದ್ಧವೂ ಪರಿಣಾಮಹಿತಕಾರಿಯೂ ಆದುದು ಭಗವತ್‌ಶಕ್ತಿ. ಅದನ್ನು ನಮ್ಮದಾಗಿಸಿಕೊಳ್ಳಬೇಕು. ಅದಕ್ಕಾಗಿ ಆ ರೀತಿ ವರ್ತಿಸಿ, ಆರೀತಿಯಾಗಬೇಕು. ಅಂದರೆ ನಮ್ಮ ಕಣ್ಣುಗಳಿಂದ ಮಂಗಲಕರವಾದುದನ್ನು ನೋಡುವ ನಮ್ಮ ಕಿವಿಗಳಿಂದ ಮಂಗಲಕರವಾದುದನ್ನು ಕೇಳುವ, ಮನಸ್ಸಿನಿಂದ ಮಂಗಲಕರವಾದುದನ್ನು ಚಿಂತಿಸುವ, ನಾಲಿಗೆಯಿಂದ ಮಂಗಲಕರವಾದುದನ್ನು ನುಡಿಯುವಂತಹವರಾದರೇನೇ ಸ್ವಜಸುಖವನ್ನು ಶಾಂತಿಯನ್ನು ಸಂತೋಷವನ್ನು ಪಡೆಯುವುದು ಸಾಧ್ಯ, ಹೀಗೆ ಒಬ್ಬೊಬ್ಬ ವ್ಯಕ್ತಿಯ ಅಭ್ಯುದಯವೂ ಸಮಾಜದ ಅಭ್ಯುದಯವಾಗಿ ಪರಿಣಮಿಸಿ ಸುಖವು ಸರ್ವತ್ರ ನೆಲಸೀತು. ಈ ವ್ಯಕ್ತಿತ್ವವನ್ನು ಅಳವಡಿಸಿಕೊಂಡಿದ್ದವರು ಬಸವಣ್ಣನವರು. ಹೀಗಾಗಿಯೇ

ವಚನದಲ್ಲಿ ನಾಮಾಮೃತ ತುಂಬಿ<br>
ನಯನದಲ್ಲಿ ನಿಮ್ಮಮೂರುತಿ ತುಂಬಿ,<br>
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ,<br>
ಮನದಲ್ಲಿ ನಿಮ್ಮ ನೆನಹು ತುಂಬಿ<br>
ಕೂಡಲಸಂಗಮದೇವಾ,<br>
ನಿಮ್ಮ ಚರಣಕಮಲದಲಿ ಆನು ತುಂಬಿ

ಎಂದು ಹಾಡುತ್ತಾ ತಾವು ಸಂಪೂರ್ಣ ಶಿವಮಯರಾದರು ಭಕ್ತಿ ಭಾಂಡಾರಿ ಬಸವಣ್ಣನವರು.

ಶಿವಧ್ಯಾನವನ್ನು, ಪರಮನ ಸಂಕೀರ್ತನವನ್ನು ಮಾಡಲು ಶಿವನಂತಾಗ ಬೇಕಾದುದು ಅತೀ ಅವಶ್ಯ. "ದೇವಂಭೂತ್ವಾ ದೇವಂಯಜೇತ್" ಅಲ್ಲದೆ ! ಅದಕ್ಕಾಗಿ ತನುಗುಣ, ಮನಗುಣಗಳೆಲ್ಲವು ಏನಿವೆಯೋ ಅವು ನಾಸ್ತಿ ಯಾಗಬೇಕು; ತನು ಮನ ಶುದ್ಧವಾಗಬೇಕು. ಅಂದರೆ "ಆಸೆಯಾಮಿಷ, ತಾಮಸ, ಹಾನಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯ ಇವನೆನ್ನ ನಾಲಿಗೆಯ ಮೇಲಿಂದತ್ತ ಕಳೆಯಯ್ಯಾ" ಎಂದು ಪ್ರಾರ್ಥಿಸಿ ತನುಗುಣ, ಮನಗುಣ, ಪ್ರಾಣಗುಣಗಳಲ್ಲಿ ಶಿವನು ಹುದುಗಿಕೊಳ್ಳುವಂತೆ ಮಾಡಿಕೊಂಡು, ಅದರಿಂದ ಶಿವಮಯರಾದರು. ಶಿವಮಯರಾದಾಗಲೇ ಶಿವರಾಗುವುದು. ಅದಕ್ಕಾಗಿ ವಚನ ಅವನನ್ನು ಕುರಿತು ಇರಿಸಿ, ಕಿವಿಗಳು ಅವನ ಕುರಿತು ಕೇಳುವಂತೆ ಮಾಡಿಕೊಂಡು, ಕಣ್ಣಲ್ಲಿ ಅವನ ರೂಪವನ್ನೇ ಕಂಡು, ಮನಸ್ಸಿನಲ್ಲಿ ಅವನ ಧ್ಯಾನವನ್ನೇ ಆವರಿಸುವಂತಾಗಿಸಿಕೊಂಡರು. ಹೀಗೆ ವಚನ, ಕಿವಿ, ಕಣ್ಣು, ಮನಗಳಲ್ಲಿ ಅವನನ್ನು ತುಂಬಿಸಿಕೊಂಡು, ಅವನಲ್ಲಿ ತುಂಬಿಕೊಂಡರು. ಇದರಿಂದಾಗಿ ತನ್ನದೆನ್ನುವ ತನು, ಮನಗಳು ಅವನದಾಗಿ ಪರಿಣಮಿಸಿ ಕೊಂಡುವು,

ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ;
ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ;
ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ;
ಇಂತೀ ತ್ರಿವಿಧವು ನಿಮ್ಮದೆಂದ ಬಳಿಕ
ಎನಗೆ ಬೇರೆ ವಿಚಾರವುಂಟೆ, ಕೂಡಲಸಂಗಮದೇವಾ

ಇದರಿಂದ ಪಡೆದ ಸುಖ-ಸಂತೋಷವನ್ನು ಕೇಳಿ–

ಸಾಸವೆಯ ಮೇಲೆ ಸಾಗರವರಿದಂತಾಯಿತ್ತಯ್ಯಾ;
ಆನಂದದಿಂದ ನಲಿನಲಿದಾಡುವೆ. ಆನಂದದಿಂದ ಕುಣಿದಾಡುವೆ.
ಕೂಡಲಸಂಗನ ಶರಣರು ಬಂದರೆ ಉಬ್ಬಿ ಉಬ್ಬಿ
ಹರುಷದಲೋಲಾಡುವೆಂ

ಹೀಗೆ ಶಿವನನ್ನು ಧ್ಯಾನಿಸುವ, ಸಂಕೀರ್ತಿಸುವ ಉದ್ದೇಶವೇನು? ಅದು, ಇದು ಎಂದು ಯಾವುದನ್ನು ಸುಖವೆಂದು ಭ್ರಮಿಸಿದುದೇನಿದೆಯೋ ಆ ಸಾಂಸಾರಿಕ ಸುಖ ಇನ್ನು ಅನುಭವಿಸುವುದಕ್ಕಲ್ಲ. ಅಥವಾ ಅದಕ್ಕಾಗಿ ಬೇಡುವುದಕ್ಕಲ್ಲ. ಮತ್ಯಾವುದಕ್ಕೆ– "ಔಡದಿರೋಡದಿರು, ನಿನ್ನ ಬೇಡುವವ ನಾನಲ್ಲ. ಶಿವನೇ ನೋಡುವೆ ಕಣ್ಣ ತುಂಬ ಆಡಿಪಾಡಿ ನಲಿದಾಡುವೆ" ಎನ್ನುವುದಕ್ಕಾಗಿ ಅವನಧ್ಯಾನ-ಸಂಕೀರ್ತನ. ಆದರೆ ಈ ಸ್ಥಿತಿ ಯನ್ನು ಪಡೆಯುವುದಕ್ಕಾಗಿ "ಎದೆ ಬರಿವನ್ನಕ್ಕ ಮನದಣಿವನ್ನಕ್ಕ ನಾಲಿಗೆ ನಲಿ ನಲಿ ದಾಡುವನ್ನಕ್ಕ ನಿಮ್ಮ ನಾಮಾಮೃತವ ತಂದೆರಸು ಕಂಡಯ್ಯಾ ಎನಗೆನ್ನ ತಂದೇ ; ಬರಿ ಮುಗುಳಂದದಿ ಎನ್ನ ಹೃದಯ ನಿಮ್ಮ ಶ್ರೀ ಚರಣದ ಮೇಲೆ ಬಿದ್ದರಳುಗೆಕೂಡಲ ಸಂಗಮ ದೇವಾ; ಎಂಬ ಪಾರ್ಥನೆ-ಚಿಂತೆ.
ಬಲವಾಗಿರಬೇಕು

ಎನ್ನ ವಾಮ ಕ್ಷೇಮ ನಿಮ್ಮದಯ್ಯಾ,
ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ,
ಎನ್ನ ಮಾನಾಪಮಾನ ನಿಮ್ಮದಯ್ಯಾ
ಬಳ್ಳಿಗೆ ಕಾಯಿದಿಮ್ಮಿತ್ತೆ ಕೂಡಲ ಸಂಗಮದೇವಾ!

ಎಂದು ಶಿವಚರಣಕ್ಕೆ ತಮ್ಮನ್ನ ಪೂರ್ಣ ಅರ್ಪಣಮಾಡಿ, ಹಾಡಿಪಾಡಿ, ಒಲಿದು-ನಲಿದ ಶಿವಸಂಕೀರ್ತನ ಸಾಗಿಸಿದ ಮಹಾನುಭಾವಿಗಳಾಗಿ ಮೆರೆದರು. ಅದರ ಫಲವಾಗಿ ಭಕ್ತಿ ಭಾಂಡಾರಿಯಾಗಿ, ಭಕ್ತ ಶ್ರೇಷ್ಠರಾಗಿ, ಇಹ ಲೋಕದ ಶಿವರೇ ಆದರು. "ನಾರಾಯಣ ಕರುಣಮಯ ಶರಣಂ ಕರವಾಣಿ ತಾವಕೌ ಚರಣೌ ಇತಿ ಷಟ್ಪದಿ ಮದೀಯವದನ ಸರೋಜೇ ಸದಾ ವಸತು" ನಾರಾಯಣನೇ, ಕರುಣಮಯನೇ, ನಿನ್ನ ಚರಣಗಳಿಗೆ ಸದಾ ಶರಣು- ಎಂಬೀ ಆರು ಪದಗಳು ನನ್ನ ವಚನಗಳಲ್ಲಿ ಸದಾ ನೆಲೆಸಲಿ ಎಂದು ಶಂಕರಾಚಾರ್ಯರು ಪ್ರಾರ್ಥಿಸಿದ್ದರ ಅಂತರಾರ್ಥವೂ ಇದೆಯಾಗಿದೆ.

---

**ಎಂ. ಮಾಧವ ಪೈ**, "ಶ್ರೀ ನಿವಾಸ" ಡಿ.ವಿ.ಎಸ್. ಹೈಸ್ಕೂಲ್ ಪಕ್ಕ,
ವಿನೋಬ ನಗರ, ಶಿವಮೊಗ್ಗ–41

# ತತ್ತ್ವ

ತತ್ತ್ವಕ್ಕೆ ಬುದ್ಧಿ ಪ್ರಧಾನವಾದರೆ ಕಲೆಗೆ ಭಾವ ಪ್ರಧಾನವಾಗುತ್ತದೆ. ತತ್ತ್ವ ಸತ್ಯದ ದರ್ಶನಮಾಡಿಸಿದರೆ, ಕಲೆ ಆದರ್ಶನದ ಪ್ರದರ್ಶನ ಮಾಡುತ್ತದೆ. ತತ್ತ್ವಶಾಸ್ತ್ರಕ್ಕೂ ಕಲೆಗೂ, ತತ್ತ್ವಶಾಸ್ತ್ರ ಮತ್ತು ಆದರ್ಶಕ್ಕೂ ಅವಿನಾಭಾವ ಸಂಬಂಧವಿದೆ. ತತ್ತ್ವಶಾಸ್ತ್ರ ಅನೇಕ-ಸಿದ್ಧಾಂತಗಳನ್ನು ಕಟ್ಟಿಕೊಂಡ ಅಮೂರ್ತ ರೂಪ. ಕಲೆ ಅನೇಕ-ಕಲ್ಪನೆಗಳನ್ನು ಮಾಧ್ಯಮಗಳ ಮೂಲಕ-ಕಂಡುಕೊಂಡ ಮೂರ್ತರೂಪ. ಒಂದರಲ್ಲಿ ವಿಚಾರಕ್ಕೆ ಪ್ರಧಾನತೆಯಿದ್ದರೆ ಮತ್ತೊಂದರಲ್ಲಿ ಭಾವನೆಗಳಿಗೆ ಮಹತ್ವವಿದೆ.

ಸಮಾಜವನ್ನು ಅಧ್ಯಯನ ಮಾಡುತ್ತಲೇ ತತ್ತ್ವಶಾಸ್ತ್ರ ಅನೇಕ-ಸಿದ್ಧಾಂತಗಳನ್ನು ರೂಪಿಸಿದರೆ, ಬದುಕಿನ ಅನೇಕ ಮಜಲುಗಳನ್ನು ಕಲ್ಪನಾತತ್ತ್ವದ ಮೂಲಕ ಕಲೆ ಮೂರ್ತರೂಪಕ್ಕಿಳಿಸುತ್ತದೆ.

ಕಲೆಗೂ ತತ್ತ್ವಕ್ಕೂ ಸಂಬಂಧವೇ ಇಲ್ಲವೆಂದು ಕೆಲವರು, ಕಲೆ ತತ್ತ್ವವನ್ನು ಬಿಟ್ಟಿರಲಾರದೆಂದು ಕೆಲವರು ಹೇಳುವುದುಂಟು. ಕಲೆ-ತತ್ತ್ವ-ಧರ್ಮ-ನೀತಿ ಇವು ಯಾವೂ ಬದುಕನ್ನು ಬಿಟ್ಟು ಇಲ್ಲ. ನಿಜವಾದ ಅರ್ಥದಲ್ಲಿ ನೋಡಬೇಕಾದರೆ ಬದುಕಿನ ಅರ್ಥಪೂರ್ಣತೆಗಾಗಿ, ಮಾನವೀಯತೆಯ ಎತ್ತರಕ್ಕಾಗಿ ಇವು ಕಾರ್ಯಮಾಡಬೇಕಾಗುತ್ತದೆ. ತತ್ತ್ವ ಬದುಕಿನಿಂದ ದೂರ ಉಳಿದರೆ ಅದು ಉಳಿದ ಯಾವುದೇ ಕಲೆಗಳೊಂದಿಗೆ ಸಂಬಂಧವನ್ನು ಕಡಿದುಕೊಳ್ಳುತ್ತದೆ. ತತ್ತ್ವಶಾಸ್ತ್ರದ ಮುಖ್ಯಗುರಿ ಸತ್ಯ ದರ್ಶನವಾಗಿದೆ. ಸತ್ಯವನ್ನು ಶೋಧಿಸುವ ತತ್ತ್ವದ ನುಡಿಗಳು ಅಮೂರ್ತರೂಪದಲ್ಲಿರುತ್ತವೆ. ನಿಜವಾದ ಕಲೆ ವಾಸ್ತವವನ್ನು ಪುನರ್‌ಸೃಷ್ಟಿಸುವದರಿಂದ ಅದು ಸತ್ಯದರ್ಶನದ ಪ್ರದರ್ಶನವಾಗುತ್ತಾ ತತ್ತ್ವ-ಕಲೆಗಳ ಸಂಗಮವಾಗುತ್ತದೆ.

ಕಲೆ ಬದುಕಿಗಾಗಿ ಅಂದಾಗ, ಬದುಕಿನ ಸತ್ಯಗಳನ್ನೇ ಹೇಳುವ ತತ್ತ್ವ ಅನಿವಾರ್ಯವಾಗುತ್ತದೆ. ಆಗ ಬುದ್ಧಿ-ಭಾವಗಳ ನಡುವೆ ಅರ್ಥಪೂರ್ಣ ಸಂಬಂಧಉಂಟಾಗಿ ಹೊಸ ಬೆಳಕು ಮೂಡಲು ಸಾಧ್ಯವಾಗುತ್ತದೆ. ಸಮಾಜದಲ್ಲಿ ಸಮಾನತೆಯನ್ನು ತರಲು ಬಯಸುವ ಪ್ರಗತಿಪರ ಆಲೋಚನೆಯ ತತ್ತ್ವಕ್ಕೆ ಬದ್ಧವಾದ ಕಾವ್ಯಕಲೆಗೂ ವ್ಯವಸ್ಥೆಯ ವೌಢ್ಯತೆಯನ್ನು ಹಾಗೆ ಉಳಿಸಿಕೊಂಡು ಹೋಗುವ ಸಂಪ್ರದಾಯಿಕವಾದ ಕಾವ್ಯ ಕಲೆಗೂ ತುಂಬಾ ಅಂತರವಿದೆ. ಕಾವ್ಯ ಅಥವಾ ಕಲೆ ತತ್ತ್ವಕ್ಕೆ ಅಂದರೆ ಜನಪರವಾದ ತತ್ತ್ವಕ್ಕೆ ಬದ್ಧವಾದಾಗ ಮಾತ್ರ ಆ ಕಲೆ ಸಾರ್ಥಕವಾಗುತ್ತದೆ.

"ಕಲೆಗಳು ಮತ್ತು ಮಾನವ" ಎಂಬ ಇರ್ವಿನ್ ಏಡ್ಮನ್ ಅವರ ಪುಸ್ತಕದಲ್ಲಿಯೂ ಒಂದು ಸುದೀರ್ಘ ಪ್ರಕರಣ ಇದಕ್ಕೆ ಮೀಸಲಾಗಿದೆ. "ಸ್ಥೂಲವಾಗಿ ನೋಡಿದರೆ

ಕಲಾವಿದ ಮತ್ತು ದಾರ್ಶನಿಕರಷ್ಟು ದೂರವಿರುವ ಬೇರೆ ಇಬ್ಬರು ಇರಲಾರರು, ಆದರೆ ಈ ಎರಡು ಉದ್ಯಮಗಳ ನಡುವೆ ಭೇದಗಳು ಮತ್ತು ವಿರೋಧಗಳು ಇದ್ದರೂ ಕೂಡ ಕಲೆ ಮತ್ತು ತತ್ತ್ವಶಾಸ್ತ್ರ ಒಂದನ್ನೊಂದು ಒಳಗೊಳ್ಳುತ್ತದೆ. ಕಲಾವಿದ ತನ್ನ ವಿಷಯ ಗಳನ್ನು ಆರಿಸುವುದರಲ್ಲಿ ಸಾಧನ ಸಾಮುಗ್ರಿಗಳನ್ನು ಸಂಗ್ರಹಿಸುವಲ್ಲಿ ತಾನು ಜೀವನ ಪೂರ್ಣವಾದ ಅತ್ಯಂತಿಕ ಪ್ರಭಾವದಲ್ಲಿ ಜೀವನ ಮತ್ತು ಸೃಷ್ಟಿಗಳ ಮೇಲಿನ ಒಬ್ಬ ವ್ಯಾಖ್ಯಾನಕಾರನಾಗುತ್ತಾನೆ. ಅವನ ಸಾಕ್ಷಾತ್ತಾದ ಪ್ರತಿಭಾ ರೀತಿಯಲ್ಲಿ ಅವನು ಒಬ್ಬ ತತ್ತ್ವಜ್ಞಾನಿ. ಇದರರ್ಥವೆಂದರೆ ಕಲಾವಿದನು ಕೇವಲ ಜೀವನದ ನಿರೂಪಣಾಕಾರ ಅಥವಾ ವರ್ಣನಾಕಾರನಲ್ಲ, ಆದರೆ ಅವನು ವ್ಯಾಖ್ಯಾನಕಾರನಾಗುತ್ತಾನೆ. ಅಂತೆ ಅವನು ಒಬ್ಬ ತತ್ತ್ವಜ್ಞಾನಿಯಾಗುತ್ತಾನೆ. (ಡಾ. ರಂ. ಶ್ರೀ ಮುಗಳಿ, ವಿಮರ್ಶಾ ತತ್ತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ)

ದಾರ್ಶನಿಕನು ವಿಶ್ವದಲ್ಲಿ ಕಾಣಲು ಪ್ರಯತ್ನಿಸುವ ತಾರ್ಕಿಕತೆಯನ್ನೇ ಕಲಾವಿದ ತನ್ನ ಕಲಾಕೃತಿಯಲ್ಲಿ ಮೂರ್ತಗೊಳಿಸಿರುತ್ತಾನೆ. ಆದ್ದರಿಂದ ಕಲಾವಿದನಿಗೂ–ತತ್ತ್ವ ಜ್ಞಾನಿಗೂ ನಿಕಟವಾದ ಸಂಬಂಧವಿದೆ. ಉತ್ತಮ ಕೃತಿಯೊಂದರಲ್ಲಿ ಧರ್ಮ–ತತ್ತ್ವ ನೀತಿ ಇವೆಲ್ಲಾ ತಮ್ಮ ಬೇರತನಗಳನ್ನು ಕಳೆದಕೊಂಡು ಒಂದಾಗಿ ಕಾಣುತ್ತದೆ. ಹೊರನೋಟಕ್ಕೆ ಭಿನ್ನವಾಗಿ ಕಂಡರೂ, ಅಂತರಂಗದಲ್ಲಿ ಏಕತೆಯನ್ನು ರೂಪಿಸಿಕೊಂಡು ತಮ್ಮ ಸೌಂದರ್ಯ ಪ್ರಜ್ಞೆಯನ್ನು ಪ್ರಕಟಿಸುತ್ತವೆ.

ಕಾಲಕಾಲಕ್ಕೆ ದಾರ್ಶನಿಕರು ಹೊಸ ತತ್ತ್ವಗಳನ್ನು ಕಂಡುಕೊಳ್ಳುತ್ತಾರೆ. ಒಂದು ಕಾಲಕ್ಕಿದ್ದ ತತ್ತ್ವ ಮತ್ತೊಂದು ಕಾಲಕ್ಕೆ ತನ್ನ ರೂಪದಲ್ಲಿ ಮಾರ್ಪಾಡನ್ನು ಹೊಂದಬಹುದು. ಕಲೆ–ತತ್ತ್ವ–ನೀತಿ ಇವೆಲ್ಲವನ್ನೂ ಅಂದಂದಿನ ಸಮಾಜ ವ್ಯವಸ್ಥೆ ರೂಪಿಸುತ್ತದೆ. ತತ್ತ್ವ ಆಚರಣೆಯಲ್ಲಿ ಬಂದಾಗಲೇ ಅದಕ್ಕೆ ಬೆಲೆ ಬರುತ್ತದೆ. ಅಂತೆಯೇ ತತ್ತ್ವಯಾವಾಗಲೂ ಧರ್ಮವನ್ನ ಅವಲಂಬಿಸಿರುತ್ತದೆ. ವಿಚಾರ ಪ್ರಧಾನತೆ ತತ್ತ್ವದ ಲ್ಲದ್ದರೆ, ಅಚಾರ ಪ್ರಧಾನತೆ–ಧರ್ಮದಲ್ಲಿರುತ್ತದೆ, ಈ ದೇಶದಲ್ಲಿಯ ಬಹಳಷ್ಟು ಧರ್ಮ ಗಳು ಕೇವಲ ಮತ ಧರ್ಮಗಳಾಗಿರುವುದರಿಂದ, ಅಲ್ಲಿ ಹೇಳುವ ತತ್ತ್ವಗಳೂ ಕೂಡ ವಿಶಾಲತೆಯನ್ನು ಕಳೆದುಕೊಂಡು ಮತೀಯ ನೆರಳಿನಲ್ಲಿ ನರಳುತ್ತವೆ. ಆದ್ದರಿಂದ ಮಾನವೀಯತೆಯಲ್ಲಿ ಧರ್ಮ ಬೆಳೆದಾಗ ತತ್ತ್ವ ಸತ್ಯದ ದರ್ಶನ ಮಾಡಿಸಲು ಸಾಧ್ಯವಾಗುತ್ತದೆ.

(ಸೌಜನ್ಯ: ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಕಮಲಾಪುರ ೫೮೩ ೨೨೧)

---

ಡಾ|| ಬಸವರಾಜ ಸಬರದ
ರೀಡರ್, ಕನ್ನಡ ವಿಭಾಗ ಸ್ನಾತಕೋತ್ತರ ಕೇಂದ್ರ, ರಾಯಚೂರು.

# ಶ್ರೀ ಸಿದ್ಧಲಿಂಗೇಶ್ವರ ಜಾತ್ರಾ ಮಹೋತ್ಸವ ವೈಭವ

--ಹೆಚ್. ವಿ. ವೀರಭದ್ರಯ್ಯ

ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರಾ ಅಂಗವಾಗಿ ಸಂಯೋಜಿಸಿದ್ದ ಧಾರ್ಮಿಕ ವಿಧಿಗಳು, ಉತ್ಸವಗಳು, ದಾಸೋಹ ಕೈಂಕರ್ಯ, ಜನ-ಜಾನುವಾರಗಳ ಸಂಭ್ರಮ ಸಡಗರದ ಸಮಾವೇಶ, ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಶೈಕ್ಷಣಿಕ ಪ್ರದರ್ಶನ, ಶ್ರೀದರ್ಶನ ಮಂಟಪದ ಮೂಲಕ ಪ.ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ನಡೆದು ಬಂದ 65 ವರ್ಷಗಳ ತಪೋಜೀವನದ ದೀಪದ ಹೆಜ್ಜೆಗಳ ಚಿತ್ರ ಪ್ರದರ್ಶನ ಎಲ್ಲವೂ ಅವಿಸ್ಮರಣೀಯವೆಂಬಂತೆ ಜನಮನದಲ್ಲಿ ದಾಖಲಾದವು.

ಶ್ರೀ ಸಿದ್ಧಗಂಗಾಮಠದ ಸೇವಾ ಕೈಂಕರ್ಯ ಇಂದು ನಿನ್ನೆಯದಲ್ಲ. ಶತಮಾನಗಳಿಂದ ನಡೆದು ಬಂದದ್ದು ದಾಸೋಹ 18ನೆಯ ಶತಮಾನದಿಂದಲೇ ಪ್ರಾರಂಭ-ವಾಯಿತು. ಜಾತ್ರೆ 1902 ರಿಂದ ಸಾಗಿಬಂದಿದೆ. ವಸ್ತು ಪ್ರದರ್ಶನ 1964ರಿಂದ ಪ್ರಾರಂಭವಾಗಿ ಅವಿಚ್ಛಿನ್ನವಾಗಿ ಮುನ್ನಡೆದಿದೆ. ಇವೆಲ್ಲದರ ಹಿಂದಿರುವ ಶ್ರೀ ಶ್ರೀಗಳವರ ಸೇವಾ ಸಂಕಲ್ಪ ಜನ-ಜಾಗೃತಿಯನ್ನುಂಟು ಮಾಡುವುದು. ಮಾನವೀಯತೆಯ ಮಂಗಳ ಬೆಳಕನ್ನು ಪ್ರಸರಿಸುವುದಾಗಿದೆ. ದನಗಳ ಪ್ರದರ್ಶನ, ರೈತವರ್ಗದ ಬಂಧುಗಳು ಪಶು-ಪಾಲನೆಯನ್ನು ಮುಂದುವರಿಸಿಕೊಂಡು ಹೋಗಬೇಕು ಎಂಬ ಗುರಿಯನ್ನಿಟ್ಟು ಆಚರಿಸುತ್ತಿದೆ. ಇದಕ್ಕೆ ಸಹಸ್ರ-ಸಹಸ್ರರೂಗಳ ಬಹುಮಾನವನ್ನು ವಿನಿಯೋಗಿಸುವುದರ ಮೂಲಕ ರೈತರನ್ನು ಪ್ರೋತ್ಸಾಹಿಸುತ್ತಾ ಪಶು ಸಂಪತ್ತಿನ ಅಗತ್ಯತೆಯನ್ನು ಎತ್ತಿ ತೋರಿಸುತ್ತಿದೆ.

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮೂಲಕ ರಾಜ್ಯ ಸಾಧಿಸುತ್ತ ಬಂದಿರುವ ಪ್ರಗತಿ ಚಿತ್ರವನ್ನು ಗ್ರಾಮೀಣ ಬಂಧುಗಳಿಗೆ ತೋರಿಸುತ್ತಿದೆ. ಕೃಷಿ, ಅರಣ್ಯ, ತೋಟಗಾರಿಕೆ, ರೇಷ್ಮೆ ಸಾಕಣಿಕೆ, ಮೀನುಗಾರಿಕೆ, ಕುರಿಸಾಕಣೆ, ಲೋಕೋಪಯೋಗಿ, ನೀರಾವರಿ, ತಾಂತ್ರಿಕ, ಬ್ಯಾಂಕ್, ಕೈಮಗ್ಗ, ಗೃಹ-ಗುಡಿಕೈಗಾರಿಕೆ ಇನ್ನು ಹಲವಾರು ಇಲಾಖೆಗಳು ತಮ್ಮ ಸಾಧನೆಯನ್ನು ಪ್ರದರ್ಶಿಸುವುದರ ಮೂಲಕ ಗ್ರಾಮೀಣರಿಗೆ ಆ ಮಾರ್ಗವನ್ನನುಸರಿಸಲು ಪ್ರೇರಣೆ ಕೊಡುತ್ತಿರುವುದು ಪ್ರಶಂಸನೀಯ.

ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ 32 ವರ್ಷಗಳಿಂದಲೂ ನಾಡಿನ ಅನೇಕ ಸಂಗೀತ, ನೃತ್ಯ, ನಾಟಕ, ಜಾನಪದ ಕಲಾ ತಂಡಗಳನ್ನು ನಿರಂತರವಾಗಿ ಸಂಸ್ಕೃತಿ ಪರಂಪರೆಯನ್ನು ಪ್ರೋತ್ಸಾಹಿಸುತ್ತಾ ಮುನ್ನಡೆದಿರುವುದು ಸ್ತುತ್ಯಾರ್ಹವಾದ ವಿಚಾರ. ಸರ್ಕಾರ ತನ್ನ ಅಕಾಡೆಮಿಗಳ ಮೂಲಕ ಮಾಡುತ್ತಿರುವ ಕೆಲಸವನ್ನು ಶ್ರೀಮಠದ ಈ ಮೂಲಕ ಯಾವುದೊಂದೂ ಆರ್ಥಿಕ ನೆರವು, ಸಲಹೆ, ಮಾರ್ಗದರ್ಶನ

ಗಳಿಲ್ಲದೆ ನಡೆಸುತ್ತಿರುವುದು ಗಮನಿಸಬೇಕಾದ ವಿಚಾರ. ಜೊತೆಗೆ ಚಿತ್ರ ನಟ-ನಟಿಯರನ್ನು ಜನತೆಗೆ ಪರಿಚಯಿಸುವ, ಸಂದರ್ಶನ ಕಾರ್ಯಕ್ರಮವನ್ನು ಹಮ್ಮಿಕೊಂಡು ಜನತೆಗೆ ಸ್ಪಂದಿಸುತ್ತಿರುವ ಸೇವಾಮಣಿಹ ವಸ್ತುಪ್ರದರ್ಶನ.

ಜಾತ್ರೆ ಕೇವಲ ಜನಸಂದಣಿಯ ಸಮೂಹವಾಗದೆ ಅನೌಪಚಾರಿಕ ಶಿಕ್ಷಣವನ್ನು ಪಡೆಯುವ ವಿನೂತನ ವೈಧಾನಿಕ ವ್ಯವಸ್ಥೆಯನ್ನಾಗಿ ಮಾರ್ಪಡಿಸುತ್ತಿರುವ ಪರಮ ಪೂಜ್ಯ ಶ್ರೀ ಶ್ರೀಗಳವರ ಹಂಬಲ ನಿಜಕ್ಕೂ ಆದರ್ಶನೀಯ. ಸರ್ಕಾರ, ಸಮಾಜತಾವಾಗಿ ಸಹಕರಿಸುವ ರಚನಾತ್ಮಕ ಗ್ರಾಮೀಣ ಶಿಬಿರ ಎನ್ನಬೇಕು. ಈ ಎಲ್ಲ ಉತ್ಸವಗಳು, ಪ್ರದರ್ಶನಗಳು ಶಿಸ್ತು ಸಂಯಮಗಳಿಂದ ನಡೆಯಲು ಸಹಕರಿಸುತ್ತಿರುವ ರಕ್ಷಣಾ-ಇಲಾಖೆ, ಗೃಹ ರಕ್ಷಕದಳ ಶಿಕ್ಷಕ ಸಿಬ್ಬಂದಿ, ವಿದ್ಯಾರ್ಥಿ ಸಮೂಹ, ಅಭಿಮಾನಿಗಳ ಬಳಗ ಹಳೆಯ ವಿದ್ಯಾರ್ಥಿಗಳ ಸಂಘ ನಿಜಕ್ಕೂ ಶ್ಲಾಘನೀಯ.

ನಾಡು ನುಡಿಗಳ ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಜಾತ್ರೆ ಅದಕ್ಕೆ ಸಂಬಂಧಿಸಿರುವ ಎಲ್ಲ ವ್ಯವಸ್ಥೆಗಳೂ ಸಕ್ರಿಯವಾಗಿ ಸಲ್ಲಿಸುತ್ತಿರುವ ಸೇವೆಯನ್ನು ಸಾರ್ವಜನಿಕರು ಸರ್ಕಾರ ರಾಷ್ಟ್ರದ ಹಿತದೃಷ್ಟಿಯಿಂದ ಬೆಂಬಲಿಸಬೇಕು. ರಾಷ್ಟ್ರೀಯಭಾವೈಕ್ಯತೆ ಎಂಬ ಮಾತಿಗೆ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ ಸ್ಪಷ್ಟ ಉದಾಹರಣೆಯಾಗಿದೆ. ರಾಜ್ಯ ನೆರೆ ರಾಜ್ಯಗಳಿಂದ ಭಕ್ತಾದಿಗಳು ಆಗಮಿಸುತ್ತಾ ವೈವಿಧ್ಯತೆಯಲ್ಲಿ ಏಕತೆಯನ್ನು ಪ್ರದರ್ಶಿಸುತ್ತಿರುವುದು ಹೆಮ್ಮೆಯ ವಿಚಾರ.

ಎಳೆಯ ಕಂದಮ್ಮಗಳು ಜಾತ್ರೆಯ ಯಶಸ್ವಿಗಾಗಿ ಶ್ರಮಿಸುತ್ತಿರುವುದು ಹೃದಯ ಸ್ಪರ್ಶಿಯಾದ ನೋವಾಗಿರುತ್ತದೆ. ನಿದ್ದೆ ಮಾಡುವ ಸಮಯದಲ್ಲೂ ಎದ್ದು ಸೇವೆಮಾಡುವ ಎಳೆಯ ಮನಸ್ಸುಗಳ ಪಾವಿತ್ರತೆಯನ್ನು ಗುರುತಿಸುವುದು ಸುಸಂಸ್ಕೃತಿಯ ಲಕ್ಷಣ.

12 ನೇ ಶತಮಾನ ಜಗತ್ತಿಗೆ ನೀಡಿದ ಮಹಾಮಂತ್ರ ಕಾಯಕ, ಮತ್ತು ದಾಸೋಹ. ಬಸವಾದಿಶರಣರು ಬಿತ್ತಿ ಬೆಳೆದ ಅಮೃತ ಫಲಗಳು. ಈ ಎರಡು ತತ್ವಗಳು, ಅವುಗಳನ್ನು ಪ್ರತ್ಯಕ್ಷ ಕಾಣುವ ಭಾಗ್ಯ ಸಿದ್ಧಗಂಗೆಯ ಕಮ್ಮಟದಲ್ಲಿ ಮಹಾ ಜನತೆಗೆ ಲಭ್ಯವಾಗುತ್ತಿರುವುದು ಭಾಗ್ಯವಲ್ಲದೆ ಮತ್ತೇನು. ಕಾಯಕ ದಾಸೋಹಗಳ ಪ್ರಯೋಗ ಶಾಲೆಯಾಗಿ ಶ್ರೀ ಮಠ ಜನತೆಯ ಮಹಾ ಮನೆಯಾಗಿ ಕುಲ, ಕೋಮು ಪಂಗಡ, ಜಾತೀಯತೆಗಳ ಬಲೆಯನ್ನು ಕಿತ್ತೊಗೆದು ಜಾತ್ಯತೀತ ಸಂಸ್ಥೆ ಎಂಬುದಾಗಿ ಜನತೆಯ ಮುಕ್ತ ಪ್ರಶಂಸೆಗೆ ಪಾತ್ರವಾಗಿರುವುದು ಯುಗದ ಭಾಗ್ಯ, ನಾಡಿನ ಪುಣ್ಯ. ಇವೆಲ್ಲದರ ಶಿವ ಶಿಲ್ಪಿ ಪ. ಪೂ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು. ಸಿದ್ಧಗಂಗೆ ಎಂದರೆ ಶಿವಕುಮಾರ ಸ್ವಾಮಿಗಳು, ಶಿವಕುಮಾರ ಸ್ವಾಮಿಗಳೆಂದರೆ ಸಿದ್ಧಗಂಗೆ ಎನ್ನುವಂತೆ ಅಭಿಗ್ನ ಪರಿಕಲ್ಪನೆ ವಿಚಾರವಂತರ ವಿಶ್ಲೇಷಣೆಯಾಗಿದೆ.

ದಾಸೋಹದ ವೈಭವ ಪಡೆದ ಕಣ್ಣಿನ ಸಾರ್ಥಕತೆಗೆ ಸಾಕ್ಷಿಎಂಬಂತೆ ರಾಶಿ ರಾಶಿ ಅನ್ನ, ಬೃಹತ್ ಬಾಂಡೆಗಳ ತುಂಬ ಸಾರು, ಪಾಯಸ, ಬೆಟ್ಟದೋಪಾದಿಯಲ್ಲಿ ಕಟ್ಟೆ

ೂಡಿಸಿರುವ ಮುದ್ದೆಯ ಹಿರಿ ಗುಡ್ಡೆಗಳು, ಅವೆಲ್ಲವನ್ನೂ ಸವಿಯುವುದಕ್ಕೆ ಬರುವ ಕ್ಷಾಂತರ ಬಾಯಿಗಳು, ತೃಪ್ತಿ ಪಡುವ ಮನಸ್ಸುಗಳು ಇನ್ನೆಲ್ಲೂ ಸಿಗದ ಅಪೂರ್ವ ೃಶ್ಯ ಮಹಾ ಮನೆಯ ಪ್ರಸಾದ ವಿತರಣೆಯ ಸುಂದರ ಭಾವುಕ ನೋಟ ಇದೆಲ್ಲವನ್ನು ೃಯೆಲ್ಲಾ ಕಣ್ಣಾಗಿ, ಸುಳಿವ ಕಾಲೆಲ್ಲ ನದಿಯಾಗಿ ಮೇಲ್ವಿಚಾರಣೆ ನಡೆಸುವ ವಯೋಗಿಗಳ ಸಂಚಾರ ಅದೊಂದು ಭಕ್ತಿಲೋಕದ ಶಿವದೃಶ್ಯವೆಂದೇ ಹೇಳಬೇಕು. ಲ್ಯಾಣದ ಪುನರ್ಜನ್ಮ ಸಿದ್ಧಗಂಗೆಯಲ್ಲಿ ಸಂಭ್ರಮಿಸಿತೋ ಎನ್ನುವಂತೆ ಭವ್ಯದಿವ್ಯ.

**ಜಾತ್ರೆಯ ಪ್ರಮುಖ ಉತ್ಸವಗಳಿಂದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಥೋತ್ಸವ, ಬೆಳ್ಳಿಪಾಲಕಿ ಉತ್ಸವ, ಮುತ್ತಿನಪಾಲಕಿ ಉತ್ಸವ, ಪಂಚ-ಬ್ರಹ್ಮೋತ್ಸವ ವಿಶಿಷ್ಟ ಹಾಗೂ ವೈಭವ ಪೂರ್ಣ ಬೆಳ್ಳಿಪಾಲಕ್ಕಿ ಉತ್ಸವದ ಂಗವಾಗಿ ಏರ್ಪಡಿಸುವ ಮದ್ದಿನ ಸಂಭ್ರಮ, ಪಟಾಕಿಗಳ ಆರ್ಭಟ, ಯಕ್ಷ ೋಕವನ್ನು ಎಳೆ ತರುವ ಆಕರ್ಷಣೀಯ ಭಾಗ. ಇದರ ಹಿಂದಿರುವ** ನುಷ್ಯ ತನ್ನಲ್ಲಿರುವ ಅರಿಷಡ್ವರ್ಗಗಳನ್ನು ಸುಡುವ ಹೊರತು ಶಿವಯೋಗ ಸಾಧ್ಯ ಾಗದು ಎಂಬ ಒಳಗುಟ್ಟು ಅರಿತಾಗ ಸಂತೋಷ ಹೆಚ್ಚು. "ಪಂಚಬ್ರಹ್ಮೋತ್ಸವ" ನ್ನೆಲ್ಲೂ ಕಾಣದ ಅಪರೂಪದ ವಿರಳ ಕಾರ್ಯಕ್ರಮ. ಅನ್ಯ ಮಠಗಳಿಂದ ದಯಮಾಡಿ ದ ಶಿವಯೋಗಿಗಳನ್ನು ಸಂತೋಷ ಸಂಭ್ರಮಗಳಿಂದ ಅಲಂಕರಿಸಿ ಪಲ್ಲಕ್ಕಿ ಉತ್ಸವ ನೂತನ ಕೈಂಕರ್ಯದ ಸಂಕೇತ ಪರಮ ಪೂಜ್ಯರೇ ಮುಂದೆ ನಿಂತು ತನಗಿಂತ ಕಿರಿಯ ಲ್ಲ ಎಂಬ ಬಸವಣ್ಣನವರ ವಾಣಿಯನ್ನು ಆಚರಿಸಿ ತೋರಿಸುತ್ತಿರುವ ಈ ಉತ್ಸವ ಂತೂ ಎಲ್ಲರಿಗೆ, ಎಲ್ಲ ಮಠಾಧೀಶರಿಗೆ ಅನುಕರಣೀಯ. ಒಬ್ಬಶಿವಯೋಗಿ ಮತ್ತೊಬ್ಬ ವಯೋಗಿಯನ್ನು ಭಕ್ತಿ ಗೌರವಗಳಿಂದ ಪುರಸ್ಕರಿಸುವ ಈ ಉತ್ಸವದ ಅಂತ್ಯದಲ್ಲಿ ವಾನುಭವ ಗೋಷ್ಠಿ ಸಂಯೋಜಿತವಾಗಿರುವುದು ಅರ್ಥಪೂರ್ಣ ಅರ್ಚನ, ಅರ್ಪಣ, ನಂತರದೇ, ಅನುಭಾವ, ಶ್ರೀ ಮಠದ ಎಲ್ಲ ಕಾರ್ಯಕ್ರಮಗಳೂ ಶಿವಾನುಭವಗಳೇ ಗಿದ್ದರೂ ಶರಣ ಸಿದ್ಧಾಂತದ ಆಮೂಲಾಗ್ರ ಪರಿಚಯಕ್ಕಾಗಿ ಅನುಭಾವಿಗಳ ಉಪನ್ಯಾ ಗಳ ಮೂಲಕ ಶಿವಾನುಭವ ಗೋಷ್ಠಿ ಎಲ್ಲಕ್ಕೂ ಕಳಶವಿಟ್ಟಂತೆ ತಂಗಾಳಿಬೀಸಿಪರಿಮಳ ಸರಿಸುವಂತೆ ನಡೆಯುತ್ತಿರುವುದು ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯಸಂದೇಶ.

ಜಾತ್ರೆಯ ಪ್ರಮುಖ ಆಕರ್ಷಣೆಯಾದ ಕೃಷಿ ಮತ್ತು ಕೈಗಾರಿಕಾ ವಸ್ತು ದರ್ಶನದ ವಿವಿಧ ಸಮಾರಂಭಗಳಲ್ಲಿ ಸರ್ಕಾರದ ಸಚಿವರು ಶಾಸಕರು, ಪ್ರಮುಖರು ಾಗವಹಿಸುವುದರ ಮೂಲಕ ಯಶಸ್ಸಿಗೆ ಸಹಕರಿಕರಿಸುತ್ತಿರುವುದು ಸ್ಮರಣೀಯ. ಈ ಲ್ಲಾ ಸೇವಾಮಣಿಹದ ಹಿಂದೆ ಅನಂತ ಮನಸ್ಸುಗಳು, ಕೈಗಳು ವಿನಮ್ರವಾಗಿ ನಿದ್ದೆ ಚ್ಚರಗಳಲ್ಲಿ ಶ್ರಮಿಸುತ್ತಿರುವುದು ಶ್ರೀ ಮಠದ ಮೇಲಿರುವ ಅಭಿಮಾನ ಹಾಗೂ ನಿಷ್ಠೆ ಂಬುದನ್ನು ಗಮನಿಸಿದಾಗ ಮಠಗಳ ಮಾನ್ಯಗಳ ಅಗತ್ಯ ಸಮಾಜಕ್ಕೆ ಅನಿವಾರ್ಯ ಂಬುದನ್ನು ಸದ್ದಿಲ್ಲದೆ ಸಂಸ್ಥಾಪಿಸುತ್ತಿರುವುದು ಜನತೆಯಭಾಗ್ಯ. ರಾಷ್ಟ್ರ ತನ್ನಪ್ರಜೆಗಳ ೃದಯದಲ್ಲಿ ಬದುಕುತ್ತಿದೆ ಎಂಬುದನ್ನು ನೋಡಬೇಕಾದರೆ ಸಿದ್ಧಗಂಗೆಗೆ ಬರಬೇಕು. ೇವೆಯೇ ಶಿವಪೂಜೆ. ಮಾನವೀಯತೆಯೇ ಲಿಂಗದರ್ಶನ ಎಂಬುದು ಶ್ರೀಮಠದ ಹಾ ಸಂದೇಶ.

# ಜನತಾ ಕವಿ ಸರ್ವಜ್ಞ

ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿಯೂ ಕಲಿತವರು ಬಾಯಲ್ಲಿ ಮಾತ್ರ
ಕಲಿಯದವರ ಬಾಯಲ್ಲಿಯೂ ಕೂಡ ನಲಿದಾಡುವ ಭಾಗ್ಯ ಪಡೆದ ಕವಿತೆ ರಚಿ
ವರಲ್ಲಿ ಸರ್ವಜ್ಞನು ಎದ್ದು ಕಾಣುತ್ತಾನೆ. ಅವನ ವಚನಗಳು ಜನಪ್ರಿಯವಾ
ಅನೇಕ ಕಾರಣಗಳಿವೆ. ಹಲವು ತರದ ಅಭಿರುಚಿಯುಳ್ಳ ಜನರ ನಿರೀಕ್ಷೆಗಳನ್ನು ತಣಿ
ಶಕ್ತಿ ಆತನ ವಚನಗಳಲ್ಲಿದೆ.

ಧಾರ್ಮಿಕ ಪ್ರವೃತ್ತಿಯವರಿಗೆ ಅವನು ವಚನ ಸಾಹಿತ್ಯ ಸಾಗರದ ಅವಗಾ
ದಿಂದ ನುಡಿಮುತ್ತುಗಳನ್ನು ಎತ್ತಿ ತಂದು ಒಪ್ಪವನ್ನು, ಬಣ್ಣವನ್ನು ಕೊಟ್ಟು ನೆಯ್ದಿ
ನುಡಿಹಾರಗಳನ್ನು ತುಂಬ ಮನೋಹರವಾಗಿ ಕಂಡು ಅವರು ಅವುಗಳನ್ನು ಅಂಗಿ
ಕೊಂಡು ಆನಂದ ಪಡೆಯುತ್ತಾರೆ. ಇವು ತ್ರಿಪದಿಯ ಹದವಾದ ಛಂದಸ್ಸಿನಲ್ಲಿ
ಇವನ್ನು ನೆನಪಿಟ್ಟುಕೊಳ್ಳಲು ದ್ವಿತೀಯಾಕ್ಷರ ಪ್ರಾಸ ಸಹ ನೆರವಾಗಿ, ಹಾಡಿಕೊಳ್ಳ
ಇವು ಅನುಕೂಲವಾಗಿವೆ.

ನೆತ್ತಿಯಲಿ ಅಮೃತವ : ಹೊತ್ತಿಹುದು ಜಗವೆಲ್ಲ :
ಎತ್ತನೇರೆತ್ತನರಸುವಾ ಶಿವಯೋಗಿ
ಗೆತ್ತಣದು ಮುಕ್ತಿ ಸರ್ವಜ್ಞ : 590 :

ಸಹಸ್ರದಲ ಕಮಲ ನೆತ್ತಿಯಲ್ಲಿರುತ್ತದೆ. ಅದನ್ನು ಏಕಾಗ್ರತೆಗೊಳಿಸಿ, ಯೋಗಿ
ಪರಮಾತ್ಮನನ್ನು ಕಾಣುತ್ತಾರೆ. ಅಮೃತ ಸ್ವರೂಪವನ್ನು ತಿಳಿಯದೆ ಅದನ್ನು
ಹೊರಗೆ ಅರಸುವ ಶಿವಯೋಗಿಯನ್ನು ಎತ್ತನೇರಿ ಎತ್ತನ್ನು ಅರಸುವವನು ಎಂ
ಆದಯ್ಯನ ವಚನದಿಂದ ಪ್ರೇರಿತವಾದುದು. ಇನ್ನೊಂದು ವಚನದಲ್ಲಿ ತ್ರೈಜಗದ
ತಾನಂದ : 326 :

ಜಗವು ಶಿವನೊಳಗುಂಟು : ಜಗದೊಳಗೆ ಶಿವನಿಲ್ಲ
ಜಗವು ಶಿವನಿಂದ ಬೇರಿಲ್ಲ ; ಈ ಬೆಡಗ,
ಅಹರನೆ ಬಲ್ಲ ಸರ್ವಜ್ಞ :: 336 ::

ಇನ್ನು ಬೇರೆ ವಚನಗಳಲ್ಲಿ "ಪರಮಾತ್ಮನೆಲ್ಲೆಲ್ಲು ಇರುವ (: 330 :) ಎನ್ನುತ
ಇವುಗಳಲ್ಲಿ ತೋರಿಕೆಯ ವಿರೋಧವುಂಟು. ಅಷ್ಟೇ. ತ್ರೈಲೋಕ್ಯ ತನ್ನಲ್ಲೆ ಇಹ
ಎಂಬ ಮಾತುಗಳು" ಚೆನ್ನಮಲ್ಲಿಕಾರ್ಜುನಾ ಸರ್ವಭರಿತನಾಗಿ ಎನಗೆ ಮುಖದೋ
ಎಂಬ ಮಹಾದೇವಿಯಕ್ಕನ ವಚನವನ್ನು "ಅರಿತರೆ ಶರಣ ;ಮರೆತರೆ ಮಾನವ"
ಬಸವಣ್ಣನವರ ನುಡಿಯನ್ನು ನೆನಪಿಗೆ ತರುತ್ತವೆ.

ತನ್ನಂತೆ ಪರರ ಬಗೆದಡೆ ಕೈಲಾಸ : ತನ್ನೊಳಗೆ ಇಹುದು
ಎಲ್ಲವೂ ತಾನಾಗಬಲ್ಲೊಡದು ಶಿವಯೋಗ (568)
ಸ್ಥಿರ ಅಸ್ಥಿರಗಳ ಮಹಿಮೆಯನು ಅರಿದಾತ :
ವರಜ್ಞಾನಿ ಕಾಣೊ ಸರ್ವಜ್ಞ : 320 :

ಭವವಿಲ್ಲ ಜ್ಞಾನವೆಂಬಂಜನವಿರಲು (320) ಎಂದು ಜ್ಞಾನಿಯೇ ಮುಕ್ತಾತ್ಮ ಎಂಬ ಹಿರಿಯ ತತ್ವವನ್ನು ಹೇಳುತ್ತಾನೆ. ಜ್ಞಾನಿಗೆ ಆಗುಹೋಗಿಲ್ಲ (374) ಎಂದು ತುಂಬ ತಿಳಿಯಾಗಿ ಮುಕ್ತಾತ್ಮನ ಸ್ಥಿತಿಯನ್ನು ಹೇಳುತ್ತಾನೆ.

ತನ್ನಲ್ಲಿ ಜ್ಞಾನವುದಿಸಿದ ಮಹಾತ್ಮನು
ಕನ್ನಡಿಯು ಜಗಕೆ : 388 :

ಎಂದು ಬಹು ಸುಂದರವಾಗಿ, ಅಂಥವನು ಇತರರಿಗೆ ಆದರ್ಶ ಎಂಬುದನ್ನು ಕನ್ನಡಿಯು ಎಂಬ ಅಚ್ಚಗನ್ನಡ ಮಾತಿನಲ್ಲಿ ಹುರುಳನ್ನು ತುಂಬಿ ನಿರೂಪಿಸಿದ್ದಾನೆ. ನಾನು ನೀನು ಭೇದಗಳೇನು ಬೊಮ್ಮಗೆ ಇಲ್ಲ 340 : ಎಂಬಲ್ಲಿ ಅದ್ವೈತ ತತ್ವವನ್ನು ಮತ್ತೊಂದು ವಿಧವಾಗಿ, ವಿವರಿಸಿದಂತೆ ತಿಳಿಸಿದ್ದಾನೆ.

ಅರಿತವನಿಗೆ ಜ್ಞಾನ, ಭಕ್ತಿ ಎರಡೂ ಒಂದೇ
ದೇಹದೇವಾಲಯವು : ಜೀವವೇ ಶಿವಲಿಂಗ : 261x :
ಬಾಹ್ಯಂಗಳಂದ್ದು ಭಜಿಪರಿಗೆ ಮುಕ್ತಿಸಂ
ದೇಹವಿಲ್ಲೆಂದ ಸರ್ವಜ್ಞ :
ಅರಿತವನರಿದಡೆ ಜೀವ ನೆರೆ ಸದಾಶಿವನಕ್ಕು : 390 :

ಸುಧಿಯ ಸುಧೆಯನು ಸವಿದು....ನಿಂದಿರ್ದ ಶಿವಯೋಗಿಗೆ ಮರಣವೇ ಇಲ್ಲ. ತಾನು ಹೋದರೆ ಸ್ವರ್ಗಕ್ಕೆ ಹೋದೇನು ಎಂಬ ಕನಕದಾಸರ ಮಾರ್ಮಿಕವಾದ ಮಾತಿದೆ. "ಐಕ್ಯಂಗೆ ತಾನೆಂಬುದಿಲ್ಲ : (154) : ಎಂದು ಸರ್ವಜ್ಞ ಹೇಳಿದ್ದಾನೆ. "ಸೋಹಂ ಶಿವನೇ ನಿನ್ನ ಹೊರತು ಅನ್ಯರು ಇಲ್ಲ." ಎಂಬ ಶಿಶುನಾಳ ಶರೀಫರ ಅಮೃತವಾಣಿಯಂತೆ ಆತ್ಮದ ತಿಳಿವಿನಲ್ಲಿ ಪರಮಾತ್ಮನ ಬೆಳಗು ಮೂಡುತ್ತದೆ.

"ಮಣಿಯನೆಣಿಸಿ ದಿನವ ಕಳೆಯಲು ಬೇಡ; ಕ್ಷಣವಾದಡೂ ನಿಜದ ನೆನಹೇ ಸಾಕು" ಎಂದು ಅಲ್ಲಮಪ್ರಭು ಹೇಳಿದ್ದಾನೆ.

ಮನೆಯೇನು ಮಠವೇನು : ನೆನೆಹು ಇದ್ದರೆ ಸಾಕು :
ಮನಮುಟ್ಟಿ ಶಿವನ ನೆನೆಯುದನು ಬಿಟ್ಟದ :
ಕೊನೆಯಲ್ಲಿದ್ದೇನು ಸರ್ವಜ್ಞ : 259 :

ಎಂದು ಸರ್ವಜ್ಞನು ಸರ್ವರೂ ಅರಿಯುವಂತೆ ಸರಳವಾಗಿ ತಿಳಿಸಿದ್ದಾನೆ.

ಅರಿವಿಲ್ಲದ ಭಕ್ತಿಯಿಂದ ಅರ್ಥಹೀನ, ಮೂಢಭಕ್ತಿಯುಂಟಾಗುತ್ತದೆ. ಅ
ಭಕ್ತಿಯಿಂದ ಲಿಂಗವನ್ನು ಪೂಜಿಸಿದರೆ, "ಗುಹೇಶ್ವರಾ, ನೀನು ಕಲ್ಲಾದರೆ ನಾನೇನ
ನಯ್ಯ" ಎಂಬ ಅಲ್ಲಮನ ಮಾತಿನ ಎಚ್ಚರಿಕೆ ಅಗತ್ಯವಾಗುತ್ತದೆ.

ಕಲ್ಲು ಕಲ್ಲೆಂಬುವಿರಿ : ಕಲ್ಲೊಳಿಪ್ಪದೆ ದೈವ ;
ಕಲ್ಲಲ್ಲಿ ಕಳೆಯ ನಿಲಿಸಿದ : ಗುರುವಿನ
ಸೊಲ್ಲಲ್ಲೆ ದೈವ? ಸರ್ವಜ್ಞ : 201 :

ಎಂಬಲ್ಲಿ, ಜ್ಞಾನದ ಕಳೆಯಿಂದಲೆ ಸಾಕ್ಷಾತ್ಕಾರ ಎಂಬ ಮಾತಿನಮರ್ಮ ಹೊಳೆಯು

"ಅಂತರಂಗದ ಅರಿವಿಗೆ ಆಚಾರವೇ ಕಾಯ" ಎಂದು ಅಲ್ಲಮಪ್ರಭು ಬ
ಘನವಾದ ಮಾತನ್ನು ಹೇಳಿದ್ದಾನೆ. ಅರಿವಿನ ಗುಣ ಇರವಿನಲ್ಲಿ ತೋರಬೇಕು. ಓದು
ಕಾಶೀಬಂಡ, ತಿನ್ನುವುದು ಮಶೀಕೆಂಡ ಎನ್ನುವಂತೆ ಆಗಬಾರದು.

ಭುವನದ ಪ್ರಾಣಿಗಳಿಗಾದವನೆ ದೇವ (190) ಎಂದು ಹೇಳುವಲ್ಲಿಯೂ "ತನ್ನ
ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು" ಎಂಬಲ್ಲಿಯೂ ಅಕ್ಕನ "ಸರ್ವಭರಿತನ
ಎನಗೆ ಮುಖದೋರು" ಎಂಬ ಮಾತನ್ನು ಬಸವಣ್ಣನವರ "ಸಕಲ ಜೀವಾತ್ಮ
ಲೇಸನೇ ಬಯಸುವುದು ನಮ್ಮ ಕೂಡಲ ಸಂಗನ ಶರಣರು" ಎಂಬ ಅಮೃತವಾ
ಯನ್ನು ಇನ್ನೂ ತಿಳಿಯಾಗಿ ವಿವರಿಸಿರುತ್ತಾನೆ. ಅಲ್ಲದೆ, ಆದೇವ ಈ ದೇವ ಮಾಡ
ನೆನಬೇಡ....ಎಂದು ಹೇಳಿ ಮುಂದೆ ಜಗತ್ತಿನ ಜೀವಿಗಳಿಗೆ ಹಿತಕಾರಿಯಾಗಿರುವವ
ದೇವ ಎನ್ನುವಲ್ಲಿ ಲೋಕೋಪಕಾರಿಯಾದ ಮಾನವನಿಗೆ ಮಹತ್ವವನ್ನುಕೊಡು
ಅವರೆಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವನೆಂಬುದನ್ನು ಒಪ್ಪಬೇಕಾಗುತ್ತ

ಅಲ್ಲಿಪ್ಪನಿಲ್ಲಿಪ್ಪ : ನೆಲ್ಲಿಪ್ಪನೆನಬೇಡ
ಕಲ್ಲಿನಂತಿಪ್ಪ ಮನ ಕರಗೆ ಪರಶಿವನು :
ಅಲ್ಲಿಪ್ಪನೋಡ ಸರ್ವಜ್ಞ : 332 :

ಎಂಬಲ್ಲಿ ಅಂತಃಕರಣ (ದಯೆ) ಧರ್ಮದ ಮೂಲ ಎಂಬುದನ್ನು ಬಹಳ ಸೊಗಸ
ಹೇಳಿದ್ದಾನೆ. ಮನಸ್ಸಿಗೆ, ಭಾವನೆಗೆ ಮೂಲ ಹೃದಯವಿಲ್ಲ; ಮೆದುಳು. ಆ ಮೆದ
ನಲ್ಲಿ ದಯಾರಸದ ಗಂಗೆ ಉದ್ಭವಿಸಿ ಹರಿದು ಬಂದರೆ ಆ ಮಾನವನೇ ದೇವ
(ಶಿವ,ಕಾಲ್ಯಾಣಕಾರಿ) ಎಂದಿದರ ಅರ್ಥ.

"ಪರೋಪಕಾರ ಧರ್ಮಾಯ ಪಾಪಾಯ ಪರಪೀಡನಂ" ಎಂಬಲ್ಲಿನ ಧ
ಎಂಬುದರ ಕನ್ನಡ ಅರ್ಥವನ್ನು ತೆಗೆದುಕೊಂಡು "ಈವಂಗೆ ದೇವಂಗೆ ಆವುದಂತರವ
ಎಂದು ಕೇಳಿರುವನು.

"ಅನ್ನಂ ಬ್ರಹ್ಮೇತಿ ವ್ಯಜಾನಾತ್" ಎಂಬ ಉಪನಿಷತ್ತಿನ ಸರಳ ಮಹಾಕಾವ್ಯವನ್ನು "ಅನ್ನದೇವರ ಮುಂದೆ ಇನ್ನು ದೇವರುಂಟೆ?" ಎಂಬ ಪ್ರಶ್ನಾರ್ಥಕ ಮಹಾಕಾವ್ಯವನ್ನಾಗಿ ಪರಿವರ್ತಿಸಿ, ಹೆಚ್ಚು ವಾಗ್ಮಿತೆಯ ಅವಧಾರಣೆಯನ್ನು ತಂದಿರುತ್ತಾನೆ.

ಭಗವದ್ಗೀತೆಯಲ್ಲಿ ಹೇಳಿದ ನಿಷ್ಕಾಮಕರ್ಮಕ್ಕಿಂತಲೂ ಸುಖದ, ಸಂಪತ್ತಿನ ಆಸೆದೋರಿಸಿ ಧರ್ಮಕರ್ಮಮಾಡಿರೆಂಬುದು ಜನರಿಗೆ ಹೆಚ್ಚು ಪರಿಣಾಮವನ್ನು ಬೀರುತ್ತದೆ.

ದಾನಗುಣದ ಮಹತ್ವವನ್ನು ಪ್ರಾಪಂಚಿಕರಿಗೆ ಬಿಂಬಿಸಿ ಹೇಳಲು ಸಾಂಸಾರಿಕ ಸುಖವೂ ಪಾರಮಾರ್ಥಿಕಪದವೂ ದಾನದಂಥ ಪುಣ್ಯಕರ್ಮದಿಂದ ಸಾಧ್ಯವೆಂಬ ಆಸೆಯನ್ನು ಹಲವು ಕಡೆ ತಿಳಿಸಿದ್ದಾನೆ.

ಅಂದಳವನೇರುವರೆ: ಅಂದದಲಿ ಸುಖಿಸುವರೆ:
ಮಂದಗಮನೆಯರು ದೊರೆಯುವರೆ ಹಸಿದವರಿಗೆ
ಜೆಂದದಿಂದಿಕ್ಕು ಸರ್ವಜ್ಞ ||644||

(ಆದರೆ ಈಗಿನ ನಂಬಿಕೆ ವಿಪರೀತವಾಗಿದೆ. ಹಸಿದವರಿಗೆ ಕೊಡುವುದಕ್ಕಿಂತ ಅವರ ತುತ್ತನ್ನು ಕಸಿದುಕೊಂಡು ಸಿರಿವಂತನಾದರೆ, ಅಂದಣವನ್ನು (ಅರ್ಥಾತ್ ಅಂದದ ಕಾರನ್ನು) ಚೆಂದದ ಮಂದಗಮನೆಯನ್ನು ಸುಲಭವಾಗಿ ಹೊಂದಬಹುದು ಎಂಬುದಾಗಿದೆ. ಆದರೆ ಮಾತಿನಲ್ಲಿ ಬಡವರ ಉದ್ಧಾರಮಾಡುವ ಪ್ರಚಾರ ಬಹಳವಾಗಿದೆ.)

ಸರ್ವಜ್ಞನು ಲೋಭಗುಣದ ನಿಷ್ಫಲತೆಯನ್ನು ಬಹಳ ಮಾರ್ಮಿಕವಾಗಿ ಅನೇಕ ವಚನಗಳಲ್ಲಿ ಹೇಳಿದ್ದಾನೆ. ಹಿಂದಿನ ಕಾಲದಲ್ಲಿ ಅನೇಕರು ಧನವನ್ನು ಭೂಮಿಯಲ್ಲಿ ಹೂಳಿ ಇಡುತ್ತಿದ್ದರು. ಜಿಪುಣತನದಿಂದಿದ್ದು. ಉಣ್ಣದೆ, ಚೆನ್ನಾಗಿ ಉಡದೆ, ವೆಚ್ಚಮಾಡದೆ, ಮಡಗಿ ಇಡುವವರೂ ಇದ್ದರು. (ಈಗಲೂ ಅವರ ಪರಂಪರೆ ಮುಂದುವರಿದೆ ಇದೆ. ಆದರೆ ಹೂಳುವ ಪದ್ಧತಿ ಈಗ ಕಡಿಮೆ) ಇಂಥವರನ್ನು "ಹೇನನ್ನು ತಿಂಬ ಹೀನ" ಎಂದು ಸಹ ಹೀಗಳೆದಿದ್ದಾನೆ.

ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾನಿರಿಸಿ
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ ||656||

ಸರಿಯಾಗಿ ಉಣ್ಣದುದರಿಂದ ಅಂಥವರು ಸಣ್ಣಿಸಿ (ಕೃಶರಾಗಿ) ನೆಲವನ್ನು ಸಾರಿ (ಸತ್ತಿ)ದ್ದರು. ಉಣ್ಣದೆ ಗಳಿಸಿದವ ಉಣ್ಣದೆ ಹೋದನು. (ಇನ್ನೊಂದೆಡೆ ಅಂಥವರ ಹಣವನ್ನು ಕಳ್ಳನಾಗಲಿ ನೃಪನಾಗಲಿ ಅಪಹರಿಸುತ್ತಾರೆ.) ಎಂದೂ ಅವನು ಹೇಳಿದ್ದುಂಟು.

ಜೀರೆಯುವರದನ್ನು ಕಸಿದು ಉಣ್ಣುವವರು ಹೆಚ್ಚಾಗಿಯೇ ಉಣ್ಣುವವ
ಕೂಡಿಸಿ ಇಡುವರಲ್ಲ. ಕಷ್ಟಪಟ್ಟು ದುಡಿದುದಲ್ಲವಾದ್ದರಿಂದ ಈ ಹಣವನ್ನು ಕಾ
ಇಡುವಲ್ಲಿ ಇವರಿಗೆವ್ಯಾಮೋಹವಿಲ್ಲ. "ಉದರ ನಿಮಿತ್ತಂ ಬಹುಕೃತ ವೇಷಂ
(ಕಸ್ತೂರಿ ಉವಾಚ)

ಕಂಡವರ ದಂಡಿಸುತ ಕೊಂಡವರ ಒಡವೆಗಳ
ನುಂಡುಂಡು ಮಲಗಿ ಮಡಿದ ಮೇಲವಗೆ ಯಮ
ಗೊಂಡ ತಪ್ಪುವುದೆ ಸರ್ವಜ್ಞ ||681||

ಯಮಗೊಂಡ ಯಮಲೋಕದ ಬೆಂಕಿಯಕೊಂಡ

ಹಿಂದಿನ ಲೋಭಿ ಉಣ್ಣದೆ ದೇಹವನ್ನು ಸಣ್ಣಿಸಿದರೆ, ಈ ದ್ರೋಹಿ ಕಂಡವರ
ದಂಡಿಸಿ, ಬೆದರಿಸಿ, ಹೊಡೆದು, ಬಲಾತ್ಕಾರವಾಗಿ (ಅಥವಾ ಗುಪ್ತವಾಗಿ ಅ
ಅರಿವಿಲ್ಲದಂತೆ) ಅವರ ಸೊತ್ತನ್ನು ಒಡವೆಗಳನ್ನು ಅಪಹರಿಸಿ, ಉಂಡುಂಡು ಕೊ
ತಂದುಕೊಂಡು ಮಲಗಿದವನು. ಇಂಥವನ ಮೈಗೆ ನರಕದ ಕೊಂಡದ ಚಿಕಿತ್ಸೆ ಸತ್ತ
ದೊರೆವುದು ಎಂಬುದನ್ನು ನಂಬುವವರು ಈಗ ಕಡಿಮೆಯಾಗಿದ್ದಾರೆ. ಚಾರ್ವಾ
ಅನುಯಾಯಿಗಳೇ ಈಗ ಹೆಚ್ಚು. ಮಡಿವ ಮೊದಲಾದರೂ ಅಂಥವರಿಗೆ ಕಾಯಿದೆ
ಯಮದಂಡನೆ ದೊರೆಯಬಹುದೇನೋ. ಇದು ಅನುಮಾನಾಸ್ಪದವಾದದ್ದು.

ಇನ್ನು ಕೆಲವರು ಇಲ್ಲವೆನ್ನಲೂ ಬಲ್ಲರು, ಕೊಡಲೂ ಬಲ್ಲರು. ಬೇರೆ ದಾನಿ
ಬಳಿ ಹೋಗುವುದನ್ನು ತಪ್ಪಿಸಿ, ಆ ಬಡವರನ್ನು ಕೊಲ್ಲದೆಯೇ ಕೊಲ್ಲುತ್ತಾರೆ. ||67

ಸರ್ವಜ್ಞನ ಲೋಕಾನುಭವ ಅಪಾರವಾದುದು. (ಹಲವಾರು ಲೇಖನಗಳಲ್ಲಿ
ಕುರಿತು ಬರೆದುದುಂಟು) ಇವನ ಜೀವನ ಚಿತ್ರಗಳು ತಮ್ಮಷ್ಟಕ್ಕೆ ಸ್ವಾರಸ್ಯವ
ನಿರೂಪಣದಿಂದಲೂ ಹೆಚ್ಚಿನ ಸ್ವಾರಸ್ಯವನ್ನು ಪಡೆಯುತ್ತವೆ.

ಬಸವಣ್ಣನವರು ಸಿರಿಗರ ಹೊಡೆದವರು ಸುಲಭವಾಗಿ ನುಡಿಯುವುದಿಲ್ಲ.
ಗ್ರಹ (ಭೂತ)ದ ಉಚ್ಚಾಟನೆ ಮಾಡಲು ಬಡತನವೆಂಬ ಮಂತ್ರವಾದಿ ಹೋಗ
ಒಡನೆ ತಾನು ನುಡಿವರಯ್ಯ. ಎಂದು ಸಿರಿವಂತರು ಬಡವರಾದಾಗ ಮೆತ್ತಗಾಗುತ್ತಾ
ಎಂದು ಹೇಳಿದರು. ಸರ್ವಜ್ಞನು ಬಡವರನ್ನು ಲೋಕದ ಜನ ಹೇಗೆ ಕಡೆಗಣಿಸ
ರೆಂಬುದನ್ನು ಇನ್ನೊಂದು ಬಗೆಯಲ್ಲಿ ಸ್ವಾರಸ್ಯವಾಗಿ ಹೇಳಿದ್ದಾನೆ.

ಬಡವ ಬಟ್ಟೆಯ ಹೋಗ ಲೊಡನೆ ಸಂಗಡವೇಕೆ ?
ಬಡತನವೆಂಬ ಹುಲಿಗೂಡಿ ಬರುವಾಗ
ನುಡಿಸುವವರಿಲ್ಲ ಸರ್ವಜ್ಞ ||1378||

ಬಡವನಿಗೆ ದಾರಿಯಲ್ಲಿ ತನ್ನ ಹಣವನ್ನು ಸುಲಿವರೆಂಬ ಅಂಜಿಕೆಯಿರದು. ಅದರಿಂದ ಸಂಗಡಿಗರು ಬೇಡ. ಬಡವ ಹಣವನ್ನು ಕೇಳಿಯಾನೆಂದು ಹೆದರಿಯೇ (ಹುಲಿಯಿಂದ ಹೆದರಿದಂತೆ) ದೂರಸರಿಯುತ್ತಾರೆ.

ಒತ್ತಿ ಮಾಡಿದ ಹಣ್ಣು ಹೊತ್ತು ಮಾರಿದ ಲಾಭ
ಸತ್ತವರಿಗತ್ತ ಕಣ್ಣೀನೆ ಇವು ಮೂರು
ವ್ಯರ್ಥ ಕಾಣಯ್ಯ ಸರ್ವಜ್ಞ ||1487||

ಒತ್ತಿಮಾಡಿದ ಹಣ್ಣಿನಲ್ಲಿ ಸಹಜ ಸ್ವಾರಸ್ಯವಿಲ್ಲ. ಮನಸ್ಸಿಲ್ಲದೆ ಒತ್ತಾಯದಿಂದ ಮದುವೆಯಾದ ಹೆಣ್ಣೂ ಹಾಗೆಯೇ. ತಲೆ ಹೊರೆಯ ಮೇಲೆ ಕಷ್ಟಪಟ್ಟು ತಿರುಗಿ ಮಾರಾಟ ಮಾಡುವ ಚಿಕ್ಕವ್ಯಾಪಾರಿಗಳ ಲಾಭವೂ ಹಮಾಲನ ಕೂಲಿಯ ಹಾಗೆ (ಶ್ರಮ ಅದಕ್ಕಿಂತ ಹೆಚ್ಚು) ಸತ್ತವರಿಗೆ ಅತ್ತರೂ ವ್ಯರ್ಥ. ಸತ್ತವರಿಗೆ ಅತ್ತರೆ ಅವರು ಮತ್ತೆ ಎದ್ದು ಬರುವರೆ? ಅತ್ತು ಬೆಸತ್ತವರು ಬೇಗನೆ ಸತ್ತವರ ಹತ್ತರ ಹೊರಡಲು ಸಿದ್ಧರಾಗುವುದೇ ಸರಿ.

ಉದ್ದರಿಕೊಟ್ಟವನ ಚರ್ಯೆಯನ್ನೂ ಬಹಳ ಸ್ವಾರಸ್ಯವಾಗಿ ಹದ್ದಾದ, ಹಾವಾದ, ಎದ್ದೆದ್ದು ಹರಿವ ನಾಯಾದ, ಹುತ್ತದ ಗೊದ್ದಂದಂತಾದ–ಎಂಬಲ್ಲಿ ಕೊನೆಗೆ ಅವನು ಹೇಗೆ ಸಣ್ಣ ಹಿಡಿದು ಕಿರುಕುಳ ಕೊಡುವನೆಂಬುದನ್ನು ಸೂಚಿಸಿದ್ದಾನೆ. ಒರಲೆ ಹತ್ತಿದರೆ ಹೇಗೆ ಮನೆ ಜಂತೆ, ಗೋಡೆ ಇತ್ಯಾದಿ ಹಾಳಾಗುವುದೋ ಹಾಗೇ ಮನೆಯನ್ನು ಹಾಳುಮಾಡುವನೆಂದಿದ್ದಾನೆ.

ಊಪ್ಪಿಲ್ಲದೂಟ, ಕಣ್ಣಿಗೆ ಒಪ್ಪವಿಲ್ಲದ ನಾರಿ, ತೊಪ್ಪಲ ನೀರು ಮತ್ತು ಕೊನೆಗಬ್ಬು ಚಪ್ಪೆ [1492) ಎಂದು ಹೇಳಿದ್ದಲ್ಲಿ ಜಾನಪದ ರೂಢಿಯ ದೇಸಿ ಮತ್ತು ಚಪ್ಪೆ ಎಂಬ ಶಬ್ದ ಈ ನಾಲ್ಕು ವಿಷಯಗಳಿಗೂ ಅನ್ವಯಿಸಿದುದೂ ಸ್ವಾರಸ್ಯವನ್ನು ಹೆಚ್ಚಿಸಿವೆ.

ಸರ್ವಜ್ಞನ ತ್ರಿಪದಿಗಳು ಜನಪ್ರಿಯವಾಗಲು ಹಾಸ್ಯದೃಷ್ಟಿಯಿಂದ ತನ್ನ ಲೋಕಾನುಭವಗಳನ್ನು ವ್ಯಕ್ತಗೊಳಸಿದುದು ಇನ್ನೊಂದು ಕಾರಣ.

ಸ್ತ್ರೀಯರ ಕುರಿತಾದ ನಿಂದಾ-ಸ್ತುತಿರೂಪವಾದ ಹಲವು ತ್ರಿಪದಿಗಳು ತುಂಬ ಜನಪ್ರಿಯವಾಗಿವೆ. ಅವುಗಳಲ್ಲಿ ಹಲವು ಅಶ್ಲೀಲವಾದ ಶಬ್ದಗಳನ್ನು ಹೊಂದಿದ ಪಾಠಗಳಲ್ಲಿ ಪ್ರಚಾರ ಪಡೆದುದೂ ಮುಖ್ಯ ಕಾರಣ (ಉದಾ: 1645). ಅವನ್ನೆಲ್ಲ ಉಲ್ಲೇಖಿಸದೆ, ಗೂಢವಾಗಿ ನೂತನವಾದ ರೀತಿಯಿಂದ ಹೇಳಿದ ಈ ತ್ರಿಪದಿಯನ್ನು ಸರ್ವಜ್ಞನ ಅಸಾಧಾರಣವಾದ ಜಾಣ್ಮೆಯ ಉದಾಹರಣೆಯಿಂದ ಉದ್ಧರಿಸಬಹುದು.

ಕಿರಿಯಲ್ಲಿ ನೋಡಿದರೆ: ಕರು ಮೆಟ್ಟಿದಂತಕ್ಕು:
ನಿರಿಯ ಮರೆಮಾಡಿ ತುರುಬಿಕ್ಕೆ ಜಗವೆಲ್ಲ:
ಇರಿದಾಡುತಿಹುದು ಸರ್ವಜ್ಞ : : 16 1 : :

ಅಶ್ಲೀಲ ನುಡಿಗಳಲ್ಲಿಯೇ ಹಾಸ್ಯದ ಮಾತಾಡುವ ಹಳ್ಳಿಯ ಸ್ತ್ರೀ ಪುರುಷರು

ವಿಶೇಷವಾಗಿ ಗೂಢಾರ್ಥವುಳ್ಳ ವಿಚಾರಮಾಡದೆ ಒಮ್ಮೆಲೆ ತಿಳಿಯದ, ಒ
ಅರ್ಥಗಳುಳ್ಳ ತ್ರಿಪದಿಗಳಿಂದ ಬಹಳ ಸಂತೋಷ ಹೊಂದುತ್ತಾರೆ.

ಒಡೆದ ರಾಣಿಯ ಮುತ್ತು ; ಹಡೆಯದಿದು ಹಾಗವನ್ನು
ಒಡೆದಂದು ಲಕ್ಷ್ಯವಡೆದ ಸ್ತ್ರೀರತ್ನವನು:
ಪಡೆಯುದವರಾರು ಸರ್ವಜ್ಞ : 1667

ಇಲ್ಲಿ ರಾಣಿಯ ಮುತ್ತು ಎಂಬ ಶಬ್ದ ಸಾಹಚರ್ಯದಿಂದ ಪದೆಯು
ದ್ವಂದ್ವಾರ್ಥ ತಿಳಿಯ ಬೇಕು. (ಮೊದಲು ಶ್ರೇಷ್ಠ ಮುತ್ತಾದರೂ ಒಡೆದರೆ ಅದಕ
ಏನೂ ಬೆಲೆಯಿಲ್ಲದಾಗುತ್ತದೆ), ಎಡರನೆಯ ರಾಣಿಯ (ಸುಂದರಿಯ) ಮುತ
ಎಂಬುದು ಯಾವುದೆಂಬುದನ್ನು ಒಡೆದು ಹೇಳಿದರೆ ಸ್ವಾರಸ್ಯ ಕಡಿಮೆ. ಮುತ್ತು ನವ
ರತ್ನಗಳಲ್ಲಿ ಒಂದಾಗಿರುತ್ತದೆ ಸಿಂಪು ಒಡೆದ ಮೇಲೆಯೆ ಅದು ಉಪಯೋಗ (ಉಪ
ಭೋಗ) ಯೋಗ್ಯವಾಗುತ್ತದೆ ಇದೊಂದು ಶ್ರೇಷ್ಠ ರೂಪಕವಾಗಿದೆ.

ಒಲ್ಲದ ಹೆಣ್ಣಿನೊಡನೆ ಚೆಲ್ಲವಾಡುವವನ ಪರಿಸ್ಥಿತಿಯನ್ನು ಲೇವಡಿ ಮಾಡಿ
ಸೊಗಸನ್ನು ನೋಡಬಹುದು.

ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ ;
ಕಲ್ಲುಪುತ್ಥಳಿಯ ಬಿಗಿದಪ್ಪಿ ಚುಂಬಿಸಲು ;
ಹಲ್ಲು ಹೋದಂತೆ ಸರ್ವಜ್ಞ ; 1706

ಒಲ್ಲದವಳ ದೇಹ ಚೆಲ್ಲವಾಡಿದರೂ ಈಲಾಗಿ ದ್ರವಿಸಿ ಆರ್ದ್ರವಾಗುವುದಿಲ್ಲ
ಕಲ್ಲ ಪುತ್ತಳಿ ಸುಂದರವಾದರೂ ಅದನ್ನು 'ಅಪ್ಪಿದರೆ ಸುಖವಿಲ್ಲ! ಮೆತ್ತಿದರೆ ರುಚಿಯಿಲ್ಲ
ಪ್ರೀತಿಯ ನೆಲೆ ಉಕ್ಕಲಾರದ ಮೇಲೆ ಆ ದೇಹ ಶಿಲೆಯೇ ಸರಿ.

ಜಾನಪದ ರಾಮಯಣ ಕಥೆಯ ಹಾಡಿನಲ್ಲಿ ಸೀತೆಯ ಸ್ವಯಂವರಕ್ಕೆ ಹೋದ
ರಾವಣನು ಸ್ವಯಂವರದ ಕಠಿಣ ಸ್ಪರ್ಧೆಯಲ್ಲಿ ಕಲ್ಲಡಕೆಯನ್ನು ಮೆಲ್ಲಲು ನೋಡಿದಾಗ
ಅವನ ಹಲ್ಲು ಉದುರಿದಂತೆ ಇಲ್ಲಿನ ಎಗ್ಗನ (ಮೂರ್ಖನ) ಪರಿಸ್ಥಿತಿಯಾಗುತ್ತದೆ.
ಪ್ರೀತಿಯವನೊಡನೆ ಕಲ್ಲಿನಂಥವಳ ಹೃದಯವೂ ಮೃದುವಾಗಿ, ಕಲ್ಲರಳಿ ಹೂವಾದ
ಹಾಗೆ ಆಗುತ್ತದೆ.

ಇನ್ನೊಂದೆಡೆಗೆ ಕುದುರೆಯೂ ಚದುರೆಯೂ ಒಂದೇ ತೆರವೆಂದು ಸಮನ್ವಯಿಸಿ ಹೇಳಿದ್ದಾನೆ. ಚದುರನೇರಿದರೆ ಕುಣಿಯುವುದೂ ಬೆಳ್ಳಾಳು (ಹೆದರಿದ, ಕಲೆಯ ಚದುರಿಲ್ಲದ ಜೆಪ್ಪ) ಎರಿದರೆ, ಬಿದಿರೆ ಒಗೆದು ಹಾಕುವುದು(1764)

ಈಗಿನ ಹುಡುಗಿಯರಿಗೆ ಕೈಬಳೆಗಳನ್ನು ಧರಿಸದ ಫ್ಯಾಶನ್‌ಗೀಳು ಹಿಡಿದಿರುವುದು (ಮುಖ್ಯವಾಗಿ ಕಾಲೇಜು ಹುಡುಗಿಯರಿಗೆ) ಕಾಣುತ್ತದೆ. ಅಂಗಿ-ಬೊಣ್ಣ ಹಾಕಿಕೊಳ್ಳುವ, ಫಕ್ಕನೆ ನೋಡಿದರೆ ಗಂಡು ಹುಡುಗರಂತೆ ಕಾಣುವ ಈ ಹೆಣ್ಣು ಹುಡುಗರಿಗೆ ಬಳೆಗಳು ಒಪ್ಪಲಿಕ್ಕಿಲ್ಲ. ಆದರೆ ಸೀರೆ ಉಡುವ ಹೆಂಗಸರಿಗೆ ಬಳೆಗಳಿಲ್ಲದ ನಳಿದೋಳು ದೊಂಬರ ಗೆಳೆಯಂದವಕ್ಕು ( 1711 ) ಸೌಂದರ್ಯಕ್ಕೆ ನ್ಯೂನತೆ ಯುಂಟಾಗುತ್ತದೆ ಎಂಬುದು ನಿಜ.

ಸರ್ವಜ್ಞನ ವಚನಗಳಲ್ಲಿ ಚಾವುಂಡರಾಯನ (ಕ್ರಿ.ಶ. 1050) ಲೋಕೋಪಕಾರಂ ಹಾಗೂ ಅರ್ಹದ್ದಾಸ (1400)ನ "ರಟ್ಟಮತ"ದಲ್ಲಿ ಬಂದಂಥ ಬಹುಜನೋಪಯೋಗಿಯಾದ ವೈದ್ಯ ವಿಷಯಗಳೂ, ಮಹಿಳೆಯ ಲಕ್ಷಣ ಇತ್ಯಾದಿ ವಿಷಯಗಳೂ ಇತರ ಜ್ಯೋತಿಷ್ಯ ವಿಷಯಗಳೂ ಕೆಲವುಂಟು. ಅದರಲ್ಲಿ ಸೀನಿನ ಶಕುನ ಫಲ ಸಹ ಉಂಟು. (ಒಮ್ಮೆ ಸೀತರೆ ಹೊಲ್ಲ, ಇಮ್ಮೆ ಸೀತರೆ ಲೇಸು ಇತ್ಯಾದಿ)

ಉಂಡು ಕೆಂಡವ ಕಾಸಿ ಉಃಡು ಶತಪದ ನಡೆದು
ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ
ಭಂಡಾಟವಿಲ್ಲ ಸರ್ವಜ್ಞ 2005

ಅನುಭವಿಕ ಜನಪದ ವೃದ್ಯದ ವಿಚಾರಗಳು ಆರೋಗ್ಯಕ್ಕೆ ಸಹಾಯಕವಾಗಿವೆ. ಉಂಡು ಕೆಂಡಕಾಸಿದರೆ ಶೈತ್ಯದಿಂದ ಉಂಡ ಕೂಳು ಗಟ್ಟಿಯಾಗಿ "ನಿಗುಳು" ವುದಿಲ್ಲ. ಜೀರ್ಣಕ್ಕೆ ಅನುಕೂಲವಾಗಲು ಕೆಂಡದ ಬಿಸಿಶೇಕದಿಂದ ಶರೀರದ ರಕ್ತಾಭಿಸರಣ ವೇಗವಾಗಿ ಹರಿದು. ಅನ್ನಕ್ಕೆ ಜೀರ್ಣಾಂಗದ ರಸಗಳು ಸೇರಿ ಆಹಾರ ಜೀರ್ಣವಾಗಲು ಅನುಕೂಲ. ಉಂಡ ಮೇಲೆ ನೂರು ಹೆಜ್ಜೆ ನಡೆದರೆ, ಉಂಡ ಅನ್ನ ಕಾಲಿಗೆ ಇಳಿಯುತ್ತದೆ ಎಂದು ಹಳ್ಳಿಯ ಹಳೆಯರು ಹೇಳುತ್ತಿದ್ದುದನ್ನು ಕೇಳಿದ್ದೇನೆ. ಇದರಿಂದ ಹೊಟ್ಟೆಯಲ್ಲಿ ವಾಯು ಸಂಚಯ ಕಡಿಮೆಯಾಗಬಹುದೇನೋ. ಆಮೇಲೆ ಎಡದ ಮಗ್ಗುಲಾಗಿ ಮಲಗಬೇಕೆಂದು ಸರ್ವಜ್ಞ ಹೇಳಿದರೆ, ಆಯುರ್ವೇದ ಗ್ರಂಥದಲ್ಲಿ ಬಲದ ಮಗ್ಗುಲಾಗಿ ಮಲಗಬೇಕೆಂದಿದೆ. 'ವಾಮಕುಕ್ಷಿ'ಯಾಗಲಿ, ಅಥವಾ ದಕ್ಷಿಣ ಕುಕ್ಷಿಯಾಗಿ ಮಲಗಲಿ, ಇದರಿಂದ ಮಲವಿಸರ್ಜನೆಗೆ ಚಾಲನೆ ದೊರೆತು ಇದರಿಂದ ಆರೋಗ್ಯಕ್ಕೆ ಅನುಕೂಲವಾಗುವುದು ಅನುಭವದ ವಿಷಯ. ಆಹಾರ ತಕ್ಕೊಂಡ ಮೇಲೆ ಎಡಮಗ್ಗುಲಾಗಿ ಮಲಗಿದ್ದು ಆಹಾರ ಜೀರ್ಣವಾಗುವಾಗ ಬಲಮಗ್ಗಲು ತಿರುಗಿ ಮಲಗಬೇಕು.

ಅಡರಿ ಮೂಡಲು ಮಿಂಚೆ : ಶಂಕರನ ದಿಶೆ ಬೆಳಗೆ
ಒಡನೆ ತಾ ಬಕ್ಕು ಸರ್ವಜ್ಞ ||

ಎಂದು ಹೇಳುವುದು ಹಿಂಗಾರಿನ ಮಳೆಯ ವಿಷಯದಲ್ಲಿಯಂತೂ ಸತ್ಯವಾ ಮಾತು. ಇಂಥ ಪದಗಳು ಹಳ್ಳಿಯವರ ನಾಲಗೆ ಮೇಲೆ ನಲಿದಾಡುತ್ತಲಿರುತ್ತವೆ.

ಸರ್ವಜ್ಞನ ಹಲವು ತ್ರಿಪದಿಗಳು ಜಾನಪದ ಸತ್ವವನ್ನು ಪೈಗೂಡಿಸಿಕೊಂಡ ಮೂಡಿದ ಚೆಲುನುಡಿಗಳು.

ಮರುಳ ತಾ ಮಳೆಗಂಜಿ ಮರುದಡಿಯ ಸಾರಿದರು
ಮರದ ಹನಿ ಬಿಡದು ಮಳೆ ನಿಂದು ದುರುಳರ
ನೆರೆಯು ಇಂತೆಂದ ಸರ್ವಜ್ಞ 837

ಇಲ್ಲಿನ ಮರದ ಹನಿ ಬಿಡದು ಮಳೆ ನಿಂದು ಎಂಬ ದೃಷ್ಟಾಂತ ಮಳೆ ಬಿಟ್ಟರು ಮಳೆಯ ಹನಿ ಬಿಡದು ತಾಯವ್ವ ಎಂಬ "ಗರತಿಯ ಹಾಡು" ಗ್ರಂಥದ ಜನಪ ಗೀತೆಯನ್ನು ನೆನಪಿಗೆ ಇರುತ್ತದೆ.

ಹಣವಳಿದು ಹೋದರೂ ಹೆಣಬೀಳ ಹೊಡೆದರೂ
ಮೊಣಕಾಲ ಗಣಿಕೆ ಮುರಿದರೂ ಹಾದರದ
ಕುಣಿಕೆ ಬಿಡದೆಂದ ಸರ್ವಜ್ಞ 1217

ಎಂಬ ವಚನದ ಕಣ್ಣಿಗೆ ಕಟ್ಟುವ ದೃಶ್ಯವು ವಾಸ್ತವಿಕ ಘಟನೆಗಳು ನೆನಪಿ ತಂದಂತಿದೆ. ಹಣವಿರುವ ತನಕ ವೇಶ್ಯೆ ಓಲೈಸುವುದೂ, ಹಣವಿಲ್ಲದ ಮರುದಿ ತಾನೇ ಆಗಲಿ, ಇತರರಿಂದಾಗಲಿ ಹೊಡೆದು, ಹೊಡಿಸಿ ಹೊರಹಾಕುವುದೂ ಸೂ ಪೋಕನ ವ್ಯಸನದ ತೀಟೆಯೂ ರಸವತ್ತಾಗಿ ವರ್ಣಿತವಾಗಿವೆ. ಮೊಣಕಾಲ ಗಣಿ ಮುರಿವರೂ ಎಂಬಲ್ಲಿ ಗಣಿಕೆ, ವೇಶ್ಯೆಯೇ ಅಂಥವನು (ಹಣವಿಲ್ಲದೆ) ಹೋದ ಮೊಣಕಾಲನ್ನು ಮುರಿವಳೆಂಬ ಅರ್ಥವೂ ಸೂಚಿತವಾಗಿದೆ. ಶ್ರೀರಂಗರ ಸಂಧ್ಯಾಕಾ ನಾಟಕದ ಪ್ರಾರಂಭದಲ್ಲಿ ಕೊಟ್ಟ ಮುದುಕನ ಕಾಲು ಮುರಿದ ಚಿತ್ರಕ್ಕೂ ಈ ತ್ರಿಪ ದಿಗೂ ಸಂಬಂಧವಿರುವಂತಿದೆ.

ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ
ಜಾಲಿಯ ಗಿಡವು ಗಂಧಿಲ್ಲ ದೇವನು
ಸೂಳೆಗಿಲ್ಲೆಂದ ಸರ್ವಜ್ಞ 1871

ಎಂಬ ತ್ರಿಪದಿಯು ಪ್ರಖ್ಯಾತವಾದ ಗರತಿಯ ಹಾಡಿನ ತ್ರಿಪದಿಯ ಪಾಠಾಂತ ಹಾಗೆ ಕಾಣುತ್ತದೆ.

ಮೊದಲನೆಯ ಸಾಲು ಎರಡರಲ್ಲಿಯೂ ಒಂದೇ ಆಗಿದೆ. ಎರಡನೆಯ, ಮೂರನೆಯ ಸಾಲುಗಳು ಜನಪದ ಗೀತದಲ್ಲಿ ಬೇರೆಯಾಗಿದ್ದು ಜಾಲಿಯ ಗಿಡವು ನೆರಳಲ್ಲ ಹೆಣ್ಣಿಗೆ ತೌರಿನ ಮನೆಯು ಸ್ಥಿರವಲ್ಲ;

ಎಂಬಲ್ಲಿ ಮಾತ್ರ ಜಾನಪದ ಗೀತೆ ಭಾವ ಮುಗಿಲೆತ್ತರಕ್ಕೆ ಏರುತ್ತದೆ. ಹೃದಯದಾಳಕ್ಕೆ ಇಳಿಯುತ್ತದೆ.

ಮುಪ್ಪಿನ ಷಡಕ್ಷರಿ ವರ್ಣಿಸಿದ ತಿರುಕನ ಕನಸು ಜನಪದ ಕಥೆಯಾಗಿದ್ದಿರಬೇಕು. ಸರ್ವಜ್ಞನು ತನ್ನ ಒಂದು ತ್ರಿಪದಿಯಲ್ಲಿ ಈ ಕಥೆಯನ್ನು ದೃಷ್ಟಾಂತ ರೂಪದಿಂದ ಉಲ್ಲೇಖಿಸಿದ್ದಾನೆ.

ಚಾಚಿಕೊಂಡಿಹ ಜಗವು : ಯೋಚನೆಗೆ ಬಯಲಹುದೆ :
ಯಾಚಿಸುವ ಗೊರವ ಕನವರಿಸಿ ಅರಸೆಂದು :
ನಾಚಿ ಬಿಟ್ಟಂತೆ ಸರ್ವಜ್ಞ : 347 :

ಇನ್ನೊಂದು ದೃಷ್ಟಾಂತದಲ್ಲಿ ಬ್ರಹ್ಮವನ್ನು ಅರಿತವನು ಸುಮ್ಮನಿದ್ದಿರಬೇಕು ಎಂಬದನ್ನು ಹೇಳುವಾಗ ಕಳಹೋಗಿ ಕೆಮ್ಮಿ ಸತ್ತವನೊಬ್ಬನ ಉದಾಹರಣೆಯನ್ನು ಕೊಟ್ಟದ್ದು ಸ್ವಾರಸ್ಯವಾಗಿದೆ. ಕಳುವುದಕ್ಕೆ ಹೋದವರ ಸಂಗಡ ಹೋದ ಹೆಡ್ಡತನದ ಕಥೆಗಳು ನಮ್ಮ ಜನರಲ್ಲಿ ಹಿಂದಿನಿಂದಲೂ ರೂಢವಾಗಿದೆ ಈ ಕಥೆಯಲ್ಲಿನ ಕಳ್ಳನು ಸ್ವಾಭಾವಿಕವಾಗಿಯೇ ದೇಹದ ತೊಂದರೆಯಿಂದಾಗಿ ಕೆಮ್ಮಿದವನಿರಬಹುದು. ಇದೊಂದು ನಡೆದ ಸಂಗತಿಯೋ ಅಥವಾ ಈ ಆಶಯವುಳ್ಳ ಜಾನಪದ ಕಥೆಯೊಂದಿತ್ತೋ ಏನೆಂಬುದು ಇಷ್ಟರಿಂದತಿಳಿಯುವುದಿಲ್ಲ.

ಬೊಮ್ಮವನು ಅರಿದಿಹತೆ : ಸುಮನಿದ್ದಿರಬೇಕು :
ಬೊಮ್ಮವನರಿದು ಉಸುರಿದರೆ ಕಳಹೋಗಿ :
ಕೆಮ್ಮಿ ಸತ್ತಂತೆ ಸರ್ವಜ್ಞ : 396 :

ಕೆಮ್ಮುವುದು ಕಳ್ಳನ ಕಾರ್ಯಕ್ಕೆ ಪ್ರತಿಕೂಲ ಎಂಬುದುನ್ನು ಬ್ರಹ್ಮನನ್ನು ಕುರಿತು ಹೇಳುವುದಕ್ಕೆ ಪ್ರತಿಮೆಯನ್ನಾಗಿ ಮಾಡಿದುದು ಅನಿರೀಕ್ಷಿತವಾಗಿದೆ. ಬ್ರಹ್ಮವನ್ನು ಅರಿತೆನೆಂದು ಮಾತಿನಿಂದ ತಿಳಿಸಿದರೆ ಅದು ಬ್ರಹ್ಮಜ್ಞಾನಪಡೆದವನ ಲೆಕ್ಕವಿಲ್ಲ. ಬ್ರಹ್ಮಜ್ಞಾನ ನಿಜವಾಗಿಯೂ ಇದ್ದರೆ ತಿಳಿಸುತ್ತಿರಲಿಲ್ಲ; ಎಂಬ ಭಾವ. (ಆದರೂ ಈ ಹೋಲಿಕೆ ಅಷ್ಟು ಹಿತವಾಗಿ ಕಾಣಿಸುವುದಿಲ್ಲ)

ಮನೆಯಲ್ಲಿ ಒಡಕಿದ್ದರೆ ಅದು ಎಷ್ಟು ಅನರ್ಥಕಾರಿಯೆಂಬುದನ್ನು ಹೇಳುವಾ ಸರ್ವಜ್ಞನು (ನಿಲುಕದಾ ಫಲಕೆ ನರಿ ಮಿಡುಕಿ ಸತ್ತಂತೆ) ಎಂಬ ಜಾನಪದ ಪ್ರಾಣಿ ಕ ಯನ್ನು ಕೊಟ್ಟಿದ್ದಾನೆ.

ಬೇರೆ ಊರಿನ ಹೆಣ್ಣಿನ ಸ್ನೇಹ ಎಟುಕದ ವಿಷಯ ಎಂದು ಹೇಳುವಲ್ಲಿ ಇನ್ನೊಂದು ಕಥೆಯ ಉಲ್ಲೇಖನ ಬಂದಿದೆ.

ಬೇರೂರ ಸ್ನೇಹಕ್ಕೆ : ಹಾರಿ ಹೋಗುವನೆಗ್ಗ :
ಮೀರಿದ ಶೂಲದ ಹೆಣಕೆ ನರಿ ನೆಗೆದು ಬಾ :
ಯಾರಿ ಸತ್ತಂತೆ ಸರ್ವಜ್ಞ : 1806 :

ವನಿತೆಯರು ಲತೆಗಳಂತೆ ಸಮೀಪವಿದ್ದವರನ್ನೇ ಆಶ್ರಯಿಸುತ್ತಾರೆ ಎಂಬ ಉಕ್ತಿಯ ಇಲ್ಲಿ ಪ್ರಭಾವ ಬೀರಿರಬಹುದು. ಹಾಸ್ಯಪೂರಿತವಾದ ಈ ದೃಷ್ಟಾಂತವನ್ನು ಹೆಚ್ಚಿನ ತರ್ಕಕ್ಕೆ ಒಳಪಡಿಸಲಾಗದು.

ಕವಿಯು ಆನೇಕ ಗಾದೆ ಮಾತುಗಳನ್ನು ಬಳಸಿದ್ದಾನೆ. "ಕಂಡಂತೆ ಹೇಳಿದರ ಕೆಂಡವಾಗುವರು (1242) ಎಲುವಿಲ್ಲ ನಾಲಿಗೆಗೆ (956) ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಲ್ಲದೇ? (534) (ಬಿಸಿಗಿಟ್ಟಲ್ಲಿ ಕರಗುತ್ತದೆ ಎಂಬುದು ಗಾದೆ) ಒತ್ತಿಮಾಡಿದ ಹಣ್ಣು (1487) ಅಪ್ಪ ಹಾಕಿದ ಗಿಡವು (1505) ಹೆತ್ತಮ್ಮನಿಂದ ಹಿತರಿಲ್ಲ (1521) (ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿಯಿಲ್ಲ ಗಾದೆ) ತನ್ನ ಮುಖ–ಕಣ್ಣುಗಳ ತನ ಕಣ್ಣಿಗೆ ಹೊರಗು, ಕುರುಡಂಗೆ ನಿಬ್ಬಣವು 'ಏಕೆ? (1895) ಕಾಲನಿಗೆ ದಿನವಿಲ್ಲ ಇತ್ಯಾದಿ' ಈತನ ವಚನಗಳಲ್ಲಿ ಜನಪದ ಸಾಹಿತ್ಯದಲ್ಲಿ ಪ್ರಚಾರದಲ್ಲಿರುವ ಹಲವು ಒಗಟುಗಳನ್ನು ಕಾಣಬಹುದು.

ಕಚ್ಚಿದರೆ ಕಚ್ಚುವುದು: ಕಿಚ್ಚಲ್ಲ ಬೇಳಲ್ಲ:
ಆಶ್ಚರ್ಯವಲ್ಲ ಅರಿದಲ್ಲ ಈ ಮಾತು:
ನಿಶ್ಚಯಂ ಬಲ್ಲ ಸರ್ವಜ್ಞ : : 2030 : : (ಮೆಣಸಿನಕಾಯಿ)
ನೆತ್ತಿಯಲಿ ಉಂಬುವುದು : ಸುತ್ತಲೂ ಸುರಿಸುವುದು :
ಎತ್ತಿದರೆ ಎರಡು ಹೋಳಹುದು ಕವಿಗಳಿದ
ಕುತ್ತರವ ಹೇಳಿ ಸರ್ವಜ : : 2039 : : (ಗೋದಿಕಲ್ಲು)

ಇವು ಹವ್ಯಕರ ಮದುವೆಗಳಲ್ಲಿ ಹೇಳುತ್ತಿದ್ದ ಕನ್ನಡ ಸೋಬಾನೆ ಒಗಟುಗಳನ್ನು ನೆನಪಿಗೆ ತರುತ್ತವೆ.

ಕರವುಂಟು ಕಾಲಿಲ್ಲ; ಶಿರಹರಿದ ಮುಂಡವದು
ನರದಿ ಬಿಗಿದಾರು ತುಂಡ್ಸದಕೆ ಕವಿಗಳಿಂ
ಅರಿದರಿದ ಪೇಳಿ ಸರ್ವಜ್ಞ 2062 (ಅಂಗಿ)

ಅಂಗಿಯ ಕುರಿತ ಈ ಒಗಟು ಜಾನಪದದಲ್ಲಿ ಹೀಗಿದೆ.

ಕೈಯುಂಟು ಕಾಲಿಲ್ಲ ತಲೆಹರಿದ ಮುಂಡ
ಮೈಯ್ಯೆಲ್ಲ ನವ ಘಾಯ-ಒಂಭತ್ತು ತುಂಡ
ಆಯಾಳು ರಾಯರ ಹೆಗಲೇರಿಕೊಂಡ
ಕೈ ಕಳಚಿ ಬಿಟ್ಟರೆ ತಾ ಮುದುರಿಕೊಂಡ

ಜಾನಪದದಲ್ಲಿ ಮೊದಲು ಪ್ರಚಾರದಲ್ಲಿದ್ದು, ಕಳೆದು ಹೋದ ಕೆಲವು ಒಗಟುಗಳು ಸರ್ವಜ್ಞನ ವಚನಗಳಲ್ಲಿ ಉಳಿದಿವೆಯೆಂದು ಊಹಿಸಬಹುದು. ಉದಾ

ಆಸನದಲುಂಬುವುದು ; ಸೂಸುವುದು ಬಾಯಲ್ಲಿ
ಬೇಸರದ ಹೊತ್ತು, ಕೊಲ್ಲುವದು ಕವಿಗಳಲಿ
ಸಾಸಿಗಳು ಹೇಳಿ ಸರ್ವಜ್ಞ 2035

ಇದು ಹುಕ್ಕಾವನ್ನು ಕುರಿತ ಒಗಟೆಂದು ಕಾಣುತ್ತದೆ.

ಸರ್ವಜ್ಞನಿಗೆ ಎಲ್ಲರೂ ಅವನ ಬಂಧು ಬಾಂಧವರೇ ಎಂಬಂತೆ ಅವನನ್ನು. ಅವನ ಕಾವ್ಯದ ತನಿಸೂದೆಯನೂ ಎಲ್ಲರೂ ಮೆಚ್ಚುತ್ತಾರೆ. ಸರ್ವರೂ ಸುಲಭವಾಗಿ ನೆನಪಿಡಲು ಸಾಧ್ಯವಾಗುವಂತಹ ಪ್ರಾಸಸಹಿತವಾದ, ಸುಂದರವಾದ ಉಪಮಾ-ದೃಷ್ಟಾಂತದ ಅಲಂಕಾರಗಳ ನಾವೀನ್ಯದಿಂದ ಶೋಭಿಸುವ ತ್ರಿಪದಿಗಳ ಸೊಗಸಿಗೆ ಮರುಳಾಗುತ್ತಾ ಬಂದಿದ್ದಾರೆ. ಆತನ ರೀತಿ ವಿದೂಷಕ ಸಮ್ಮಿತವಾದುದರಿಂದ ಅವು ಹೆಚ್ಚು ಆಕರ್ಷಕವಾಗಿವೆ. ಅವನ ಸುಭಾಷಿತ ವಚನಗಳಿಂದ ನಡೆ-ನುಡಿಗಳನ್ನು ತಿದ್ದಿಕೊಂಡು ಹಿರಿಯ ಮಾನವ ಜೀವನವನ್ನು ನಡೆಸಲು ಸಾಧ್ಯವಾಗುತ್ತದೆ.



# ಕ್ಷೇತ್ರವಾರ್ತೆ

--ಹೆಚ್. ಬಿ. ಗಂಗಾಧರಯ

## ಸಿದ್ಧಗಂಗಾ ಅರ್ಬನ್ ಸಹಕಾರ ಬ್ಯಾಂಕ್ ಪ್ರಾರಂಭ

ತುಮಕೂರಿನಲ್ಲಿ ದಿನಾಂಕ 3 ಫೆಬ್ರವರಿ 1995 ಗುರುವಾರ ಪ್ರಾರಂಭಿಸಲಾಯಿತ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾ ಸ್ವಾಮಿಗಳು ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟನೆ ನೆರವೇರಿಸಿ ಮಾತನಾ ತುಮಕೂರು ನಗರ ಒಳ್ಳೆಯ ಹೆಸರುಗಳಿಸಿದೆ. ಇದಕ್ಕಾಗಿ ಅನೇಕ ವ್ಯಕ್ತಿಗ ಶ್ರಮಿಸಿದ್ದಾರೆ. ಸಹಕಾರ ಬ್ಯಾಂಕ್‌ಗಳು ಉತ್ತಮವಾಗಿ ಕಾರ್ಯನಿರ್ವಹಿಸ ಆಡಳಿತಮಂಡಳಿ ದಕ್ಷತೆಯಿಂದ ಕೆಲಸಮಾಡಬೇಕು. ಈ ಸಹಕಾರ ಬ್ಯಾಂಕಿಗೆ ಬುನಾ ಹಾಕಿದವರು ಶ್ರೀ ಬಿ. ಎಸ್. ಮುದ್ದಪ್ಪ ಮತ್ತು ಶ್ರೀ ಶಾಂತಮಲ್ಲಪ್ಪನವರ ಇವರ ಮಾರ್ಗದರ್ಶನದಿಂದ ಭಾರತ ರಿಸರ್ವ ಬಕ್ಯಂಕಿನಿಂದ ಸರಳವಾಗಿ ಪರವಾನ ದೊರೆಯಿತು. ಬ್ರಷ್ಟಾಚಾರ ಇಂದು ಸರ್ವವ್ಯಾಪಿಯಾಗಿದೆ. ಇದು ಅತ್ಯಂತ ಹೇ ವಾದ ಕೃತ್ಯ. ಮಾನವೀಯ ಅನುಕಂಪವಿಲ್ಲ. ಆರಾಮಜೀವನ ಸುಲಭಗಳಿಕೆಗೆ ಜನ ಮಾರುಹೋಗಿದ್ದಾರೆ. ಸತ್ಯ ಪ್ರಾಮಾಣಿಕತೆ ರಾಷ್ಟ್ರನಾಯಕರು ಮತ್ತು ಅಧಿಕಾರಿಗ ಬೆಳೆದು ಬಂದಾಗ ಅವರ ಪ್ರಭಾವ ಸಾಮಾನ್ಯಜನತೆಯ ಮೇಲೆ ಉಂಟಾಗುತ್ತದ ಸಹಕಾರ ತತ್ವವೆಂದರೆ ಋಣ ಪರಿಹಾರ ಪರಸ್ಪರ ಹೊಂದಾಣಿಕೆಯೇ ಜೀವನದತತ್ವ

ಲೋಕಸಭೆಉಪಸಭಾಪತಿಗಳಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಠೇವಣಿ ಪ ಗಳನ್ನು ಬಿಡುಗಡೆ ಮಾಡಿ ಮಾತನಾಡಿದರು. ಸಿದ್ಧಗಂಗಾ ಸಹಕಾರ ಬ್ಯಾಂಕ ಎಲ್ಲರ ಮೇಲೆ ಒಳ್ಳೆಯ ಪರಿಣಾಮ ಬೀರಿದೆ. ಪೂಜ್ಯ ಶ್ರೀ ಶ್ರೀಗಳವರು ಶಿಕ್ಷ ಪ್ರಗತಿಯು ಮಾತ್ರವಲ್ಲದೆ ಆರ್ಥಿಕವಾಗಿ ಸಮಾಜ ಮೇಲೆತ್ತಲು ಆಶೀರ್ವದಿಸಿದ್ದಾ ಇದು ಪೂಜ್ಯರ ಬಹುಮುಖ ಕಾರ್ಯಕ್ಷೇತ್ರವನ್ನು ಪ್ರತಿಪಾದಿಸುತ್ತಿದೆ. ಈ ಬ್ಯಾಂಕ ತುಂಬಾ ಅಭಿವೃದ್ಧಿಯಾಗಿ ಬೆಳೆಯಲಿ ಎಂದು ಹಾರೈಸಿದರು.

ತುಮಕೂರಿನ ಖ್ಯಾತ ಕೈಗಾರಿಕೋದ್ಯಮಿ ಶ್ರೀ ಎನ್. ಆರ್. ಜಗದೀಶ ಮಾತನಾಡಿ ಶ್ರೀ ಶ್ರೀಗಳಿಂದ ಪ್ರಾರಂಭವಾದ ಎಲ್ಲಾ ಸಂಸ್ಥೆಗಳು ಚೆನ್ನಾಗಿ ಬೆಳೆದ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ. ಯಾವ ಪ್ರಭಾವಕ್ಕೂ ಒಳಗಾಗದೆ ಬ್ಯಾಂಕ ಉತ್ತಮವಾಗಿ ಕಲಸ ಮಾಡಲಿ ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ರೇಷ್ಮೆ ಖಾತೆ ಸಚಿವರಾದ ಶ್ರೀ ಡಿ. ನಾಗರಾಜಯ ಮಾತನಾಡಿ ಬ್ಯಾಂಕ್‌ನ ಆಡಳಿತ ಮಂಡಳಿ ಶ್ರದ್ಧೆ-ನಿಷ್ಠೆಯಿಂದ ಕಾರ್ಯನಿರ್ವಹಿ ಬೇಕು. ಬ್ಯಾಂಕ್‌ನ ಹಿತಚಿಂತನೆ ಬಹಳ ಮುಖ್ಯ. ರಾಜ್ಯದಲ್ಲಿ ಸಿದ್ಧಗಂಗಾ ಸಹಕಾ ಬ್ಯಾಂಕ್ ಪ್ರಗತಿ ಸಾಧಿಸಲಿ ಎಂದು ನುಡಿದರು.

ತುಮಕೂರು ವಿಧಾನ ಸಭಾ ಸದಸ್ಯರಾದ ಶ್ರೀ ಎಸ್. ಶಿವಣ್ಣನವರು ಮಾತನಾಡಿ ಸಹಕಾರ ತತ್ವಕ್ಕೆ ನಿಷ್ಠೆ-ಧ್ಯೇಯಗಳನ್ನು ಉಳಿಸಿ ಬೆಳೆಸಿಕೊಂಡು ಬರಬೇಕು. ಶ್ರೀ ಸಿದ್ಧಗಂಗಾ ಸಂಸ್ಥೆ ನಾಡಿಗೆ ಅಮೂಲ್ಯ ಮತ್ತು ಅಮೋಘವಾದ ಸೇವೆಸಲ್ಲಿಸುತ್ತಿದೆ. ಪೂಜ್ಯ ಶ್ರೀ ಶ್ರೀಗಳ ಅಂತಃ ಶಕ್ತಿಯ ಪ್ರಭಾವವೇ ಇದಕ್ಕೆ ಕಾರಣವಾಗಿದೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಸಿದ್ಧಗಂಗಾ ವಿಶ್ವ ವಿದ್ಯಾ ನಿಲಯವಾಗಿ ಪರಿವರ್ತನೆ ಹೊಂದಲಿ ಎಂದು ಹಾರೈಸಿದರು.

ಸಮಾರಂಭದ ಅಧ್ಯಕ್ಷ ಭಾಷಣ ಮಾಡಿದ ಸಹಕಾರ ಸಚಿವರಾದ ಶ್ರೀ ಎಸ್. ಎಸ್. ಪಾಟೀಲ್ ಮಾತನಾಡಿ ಎಲ್ಲಾ ಹಂತಗಳಲ್ಲಿ ಕನ್ನಡ ಭಷೆಯಲ್ಲಿಯೇ ವ್ಯವಹಾರ ನಡೆಯಬೇಕೆಂದು ಆಶಿಸಿದರು. ಸ್ವಾತಂತ್ರ್ಯ ಪೂರ್ವ ಮತ್ತು ನಂತರ ಬ್ರಷ್ಟಾಚಾರ ದಿಂಗ ದೇಶ ಮುಕ್ತವಾಗಿತ್ತು. ಆದರೆ ಪ್ರಸ್ತುತ ಇದು ಹೆಮ್ಮರವಾಗಿ ಬೆಳೆಯುತ್ತಿದೆ. ಈಗಿನ ಸರ್ಕಾರದ ಧ್ಯೇಯದಂತೆ ಅಧಿಕಾರಿಗಳು ಪ್ರಾಮಾಣಿಕವಾಗಿ ಸೇವೆ ಸಲ್ಲಿಸಬೇಕು. ಠೇವಣಿ, ಉಳಿತಾಯ ಪ್ರವೃತ್ತಿ ಸಾಮಾನ್ಯ ಜನತೆಯಲ್ಲಿ ಬೆಳೆಯಬೇಕು. ನಾವು ಆಂಗ್ಲರ ಎಲ್ಲಾ ಒಳ್ಳೆಯ ಅಂಶಗಳನ್ನು ಬಿಟ್ಟು ಕೆಟ್ಟದ್ದನ್ನು ಬೆಳೆಸಿಕೊಳ್ಳುತ್ತಿರುವುದು ನಮ್ಮ ಮೌಢ್ಯತೆಯ ಪ್ರತೀಕವಾಗಿದೆ. ಧರ್ಮ ಮತ್ತು ನೀತಿಯುತವಾಗಿ ದೇಶ ಸುಭಿಕ್ಷವಾಗಿ ಬುದ್ಧ-ಬಸವೇಶ್ವರರ ಆದರ್ಶಗಳ ಕನಸು ನನಸಾಗಲಿ ಎಂದು ಕರೆಯಿತ್ತರು.

ಪ್ರಾರಂಭಕ್ಕೆ ಬ್ಯಾಂಕ್‌ನ ಅಧ್ಯಕ್ಷರಾದ ಶ್ರೀ ಟಿ. ಕೆ. ನಂಜುಂಡಪ್ಪ ಸ್ವಾಗತಿಸಿದರು. ಉಪಾಧ್ಯಕ್ಷರಾದ ಶ್ರೀ ಕೆ. ಎಸ್. ಶಂಕರಯ್ಯ ವಂದಿಸಿದರು. ಪ್ರಾಧ್ಯಾಪಕರಾದ ಶ್ರೀ ಹೆಚ್. ವಿ. ವೀರಭದ್ರಯ್ಯ ಕಾರ್ಯಕ್ರಮ ನಿರೂಪಿಸಿದರು




## 31 ನೇ ಕೃಷಿ-ಕೈಗಾರಿಕಾ ವಸ್ತುಪ್ರದರ್ಶನ-1995 ಉದ್ಘಾಟನೆ

ಮಹಾಶಿವರಾತ್ರಿಯಲ್ಲಿ ಶ್ರೀ ಮಠದಲ್ಲಿ ನಡೆಯುವ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರಾ ಮಹೋತ್ಸವದಲ್ಲಿ 17 ಫೆಬ್ರವರಿ 1995 ರಾಜ್ಯದ ಕಂದಾಯ ಸಚಿವರಾದ ಶ್ರೀ ಆರ್. ಎಲ್. ಜಾಲಪ್ಪನವರು ಉದ್ಘಾಟನೆ ಮಾಡಿ ಪೂಜ್ಯ ಶ್ರೀ ಶ್ರೀಗಳು ಜನತೆಗೆ ಎಲ್ಲಾ ವಿಧದಲ್ಲಿ ತಿಳುವಳಿಕೆ ನೀಡುತ್ತಿದ್ದಾರೆ. ನಮ್ಮ ಭಾರತೀಯ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಇಲ್ಲಿ 5000 ವಿದ್ಯಾರ್ಥಿಗಳಿಗೆ ನೀಡುತ್ತಿದ್ದಾರೆ. ಸರ್ಕಾರದ ಪರವಾಗಿ ಶ್ರೀ ಶ್ರೀ ಗಳವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ ಎಂದು ನುಡಿದರು.

ರೈತರು ಆರ್ಥಿಕವಾಗಿ ಪ್ರಗತಿ ಹೊಂದಲು ನವೀನ ವಿಧಾನದಿಂದ ಕೃಷಿ ಮಾಡಬೇಕು. ರಾಸಾಯನಿಕ ಗೊಬ್ಬರಕ್ಕೆ ಬದಲಾಗಿ ಹಸಿರು ಎಲೆಗೊಬ್ಬರ ಹೆಚ್ಚಿಗೆ ಉಪಯೋಗಿಸಬೇಕು. ಗಿಡ-ಮರ ಬೆಳೆಸಬೇಕು. ಜಮೀನು ಫಲವತ್ತಾಗಿಡಲು ಬದುಗಳನ್ನು

ಹಾಕಬೇಕು. ಈ ವಿಷಯಗಳಲ್ಲಿ ಮಾಹಿತಿ ನೀಡಲು ಕಳೆದ 30 ವರ್ಷಗಳಿಂದ ವಸ್ತು ಪ್ರದರ್ಶನ ನಡೆಸಿಕೊಂಡು ಬರುತ್ತಿದ್ದಾರೆ. ಅವರು ಎಲ್ಲಾ ಶ್ರಮವಹಿಸಿ ಮಾಡುತ್ತಿ-ರುವುದು ವಿದ್ಯಾರ್ಥಿಗಳಿಗಾಗಿ, ಜನರಿಗಾಗಿ, ರೈತರಿಗಾಗಿ, ಎಲ್ಲರಿಗಾಗಿ ಎಂದು ಶ್ಲಾಘಿಸಿದರು.

ಮುಖ್ಯ ಅತಿಥಿಯಾಗಿ ರೇಷ್ಮೆಖಾತೆ ರಾಜ್ಯ ಸಚಿವರಾದ ಶ್ರೀ ಡಿ. ನಾಗರಾಜಯ್ಯ ನವರು ರೈತರ ಚಿಂತನೆಗೆ ಈ ವಸ್ತು ಪ್ರದರ್ಶನ ಬೆಳಕು ಚೆಲ್ಲುತ್ತದೆ ಎಂದರು.

ಮಾಜಿ ಸಚಿವರಾದ ಶ್ರೀ ಲಕ್ಷ್ಮೀನರಸಿಂಹಯ್ಯನವರು ಮಾತನಾಡಿ ರಾಜ್ಯ-ರಾಷ್ಟ್ರದ ಪ್ರಗತಿಯ ಪಕ್ಷಿನೋಟಕ್ಕೆ ವಸ್ತುಪ್ರದರ್ಶನ ಅಗತ್ಯ. ಶ್ರೀ ಶ್ರೀ ಗಳು ಪ್ರಯಾಸಪಟ್ಟು 30 ವರ್ಷಗಳಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಇದು ಪೂರ್ಣ ಹಂತ ಮುಟ್ಟಲು ಸರ್ಕಾರದ ಪ್ರೋತ್ಸಾಹ ದೊರೆಯಬೇಕೆಂದು ಆಶಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಾಸಕ ಶ್ರೀ ಎಸ್. ಶಿವಣ್ಣನವರು ಮಾತ ನಾಡಿ ಇದು ರೈತರಿಗೆ ತರಬೇತಿ ನೀಡುವ ವಸ್ತು ಪ್ರದರ್ಶನವಾಗಿದೆ. ಶ್ರೀ ಮಠ ಎಲ್ಲಾ ಕ್ಷೇತ್ರಗಳಲ್ಲಿ ಸಮಾಜ ಸೇವೆಯಲ್ಲಿ ತೊಡಗಿದೆ. ವಸ್ತು ಪ್ರದರ್ಶನದ ಯಶಸ್ಸಿಗೆ ಸರ್ಕಾರದ ಮೂಲಕ ನೆರವು ನೀಡಲು ಪ್ರಯತ್ನಿಸುವುದಾಗಿ ಹೇಳಿದರು.

**ಶ್ರೀ ಶ್ರೀಗಳವರ ಆಶೀರ್ವಚನ :–** ಮಾನವ ಪ್ರಗತಿ ಶೀಲ ಬಯಕೆ ಹೊಂದಿದ್ದಾನೆ. ಮುಂದುವರಿಯಬೇಕು. ಸಾಧನೆ ಮಾಡಬೇಕೆಂಬ ಹಂಬಲವುಂಟು. ಬೌದ್ಧಿಕ ಮತ್ತು ಆಧ್ಯಾತ್ಮಿಕವಾಗಿ ಸಮಾನ ಬೆಳವಣಿಗೆ ಹೊಂದುವುದೇ ಜೀವನದ ಗುರಿ. ಆರಾಮ ಜೀವನ ಸಲ್ಲದು. ಆಲಸ್ಯವಿಲ್ಲದೆ ಕ್ರಿಯಾ ಶೀಲರಾಗಿರಬೇಕು.

ಕಲಿಯುವುದು ಮಾತಿನಿಂದಲ್ಲ. ನೋಡಿಕಲಿಯುವುದು ಸುಲಭ. ರೈತರ ಹಿತ ದೃಷ್ಟಿಯಿಂದ 30 ವರ್ಷಗಳಿಂದ ವಸ್ತು ಪ್ರದರ್ಶನ ವ್ಯವಸ್ಥೆ ಮಾಡಲಾಗುತ್ತಿದೆ. ಆದರೆ ಸರ್ಕಾರದ ಕಾಯಂ ಆಜ್ಞೆ ಇಲ್ಲ. ವಿವಿಧ ಇಲಾಖೆಗಳ ಅಧಿಕಾರಿಗಳು ಹೆಚ್ಚು ಶ್ರಮವಹಿಸಿ ಸಹಕಾರ ನೀಡುವುದರ ಮೂಲಕ ವಸ್ತು ಪ್ರದರ್ಶನದ ಯಶಸ್ಸಿಗೆ ನೆರ-ವಾಗಿದ್ದಾರೆಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಕೃಷಿ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ಹೊಸ ಆವಿಷ್ಕಾರಗಳನ್ನು ಬೆಳಕಿಗೆ ತರುವಂತೆ ವಸ್ತು ಪ್ರದರ್ಶನ ರೂಪಿತವಾಗ ಬೇಕೆಂದು ಆಶಿಸಿದರು.

ಪ್ರಾರಂಭದಲ್ಲಿ ಹೆಚ್. ಬಿ. ಗಂಗಾಧರಯ್ಯ ಸ್ವಾಗತ ಕೋರಿದರು. ಜಿ. ಕುಮಾರ ಸ್ವಾಮಿ ಕಾರ್ಯಕ್ರಮ ನಿರೂಪಿಸಿದರು ಬಿ. ವೀರಭದ್ರಯ್ಯ ವಂದನೆ ಸಲ್ಲಿಸಿದರು.

# 31 ನೇ ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭ

ಫೆಬ್ರುವರಿ 17 ರಂದು ಪ್ರಾರಂಭವಾದ ವಸ್ತು ಪ್ರದರ್ಶನ ಶ್ರೀ ಮಠದಲ್ಲಿ ಮಾರ್ಚಿ ರಂದು ಮುಕ್ತಾಯಗೊಂಡಿತು. ಒಂದು ಲಕ್ಷದ 60 ಸಾವಿರ ಮಂದಿ ವಸ್ತು-ಪ್ರದರ್ಶನಕ್ಕೆ ಭೇಟಿ ನೀಡಿ ಇದರ ತಿಳುವಳಿಕೆ ಮತ್ತು ಅನುಭವ ಪಡೆದು ಕೊಂಡಿದ್ದಾರೆ. ಇದು ಕರ್ನಾಟಕದಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ನಡೆಯುವ ಏಕೈಕ ವಸ್ತು ಪ್ರದರ್ಶನವಾಗಿದೆ.

ಮುಕ್ತಾಯ ಸಮಾರಂಭದ ಸಮಾರೋಪ ಭಾಷಣವನ್ನು ಉನ್ನತ ಶಿಕ್ಷಣ ಸಚಿವರಾದ ಡಿ. ಮಂಜುನಾಥ್ ಮಾಡಿದರು. ಈ ವಸ್ತುಪ್ರದರ್ಶನ ಗ್ರಾಮಾಂತರ ರೈತರಿಗೆ ಹೆಚ್ಚು ಪ್ರಯೋಜನಕಾರಿಯಾಗಿದೆ. ಕೈಗಾರಿಕೋದ್ಯಮಿಗಳಿಗೆ ಉತ್ಸಾಹ ತಂದಿದೆ. ತುಮಕೂರು ಜಿಲ್ಲಾ ಪರಿಷತ್ 6 ಲಕ್ಷ ರೂಗಳನ್ನು ಖರ್ಚು ಮಾಡಿ ಬೋಧಪ್ರದವಾಗಿ ವ್ಯವಸ್ಥೆಗೊಳಿಸಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಕೃಷಿ ವಿಧಾನ ಪ್ರಾಯೋಗಿಕವಾಗಿ ಹೆಚ್ಚು ಬದಲಾವಣೆ ಹೊಂದುತ್ತಿದೆ. ಇದರ ಪ್ರದರ್ಶನವನ್ನು ರಚನಾತ್ಮಕವಾಗಿ ಕೃಷಿ ಇಲಾಖೆ ಮಾಡಿದೆ. ರೈತರು ಜಾಗೃತರಾಗಿ ಹೊಸ ಹೊಸ ವಿಧಾನಗಳನ್ನು ಅನುಸರಿಸಬೇಕು.

ರೈತರ ಹಿತ ದೃಷ್ಟಿಯಿಂದ ಜಾತ್ರೆಯಲ್ಲಿ ವಸ್ತು ಪ್ರದರ್ಶನವನ್ನು ವ್ಯವಸ್ಥಿತವಾಗಿ ಪೂಜ್ಯ ಶ್ರೀ ಶ್ರೀಗಳು 30 ವರ್ಷಗಳಿಂದ ಮಾಡಿಕೊಂಡು ಬರುತ್ತಿದ್ದಾರೆ. ಇಂಥಹ ಆದರ್ಶ ವ್ಯಕ್ತಿತ್ವವುಳ್ಳ ದಾಸೋಹ ಮೂರ್ತಿಗಳನ್ನು ಪ್ರಪಂಚದಲ್ಲಿ ಕಾಣಲಾಗುವುದಿಲ್ಲ. ಶಿಕ್ಷಣದಲ್ಲಿ ಇವರ ಸೇವಾ ಕೈಂಕರ್ಯವನ್ನು ಲೋಕ ಮೆಚ್ಚಿದೆ. ಶ್ರೀ ಮಠದ ಸೇವಾ ಕಾರ್ಯಗಳಲ್ಲಿ ಅಭಿಮಾನದಿಂದ ಎಲ್ಲರೂ ನೆರವಾಗ ಬೇಕೆಂದು ಕರೆಯಿತ್ತರು.

ಶಿಕ್ಷಣದ ಬಗ್ಗೆ ಮಾತನಾಡಿ, ಶ್ರೀ ಮಠ ಶಿಕ್ಷಣ ಕ್ಷೇತ್ರದಲ್ಲಿ ಮಹಾ ಕ್ರಾಂತಿ ಮಾಡಿದೆ. ಶಿಕ್ಷಕರು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಶ್ರಮಿಸಬೇಕು. ಪ್ರಾಥಮಿಕ ಶಿಕ್ಷಣದ ಯಶಸ್ಸಿಗೆ ಒತ್ತು ನೀಡಬೇಕು ಎಂದು ಹೇಳಿದರು.

**ಬಹುಮಾನ ವಿತರಣೆ :–** ಲೋಕಸಭೆಯ ಉಪ ಸಭಾಪತಿಗಳಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಮಳಿಗೆಗಳಿಗೆ ಬಹುಮಾನ ವಿತರಣೆ ಮಾಡಿದರು.

**ಪಾರಿತೋಷಕ ಬಹುಮಾನಗಳನ್ನು ಪಡೆದ ಮಳಿಗೆಗಳು :–** ಕೃಷಿ ಇಲಾಖೆ, ಅರಣ್ಯ ಇಲಾಖೆ, ಕೈಗಾರಿಕಾ ಇಲಾಖೆ, ಹೆಚ್. ಎಂ. ಟಿ. ಕೈಗಡಿಯಾರ ಇಲಾಖೆ.

**ಪ್ರಥಮ ಬಹುಮಾನಗಳನ್ನು ಪಡೆದ ಮಳಿಗೆಗಳು :–** ಆರೋಗ್ಯ ಇಲಾಖೆ, ತೋಟಗಾರಿಕೆ ಇಲಾಖೆ, ರೇಷ್ಮೆ ಇಲಾಖೆ, ಡಿ.ಎ.ವಿ.ಪಿ. ಬೆಂಗಳೂರು, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು., ಸಿದ್ಧಗಂಗಾ ವಿದ್ಯಾಸಂಸ್ಥೆ, ಗಣಿ-ಭೂ ವಿಜ್ಞಾನ, ಕೈಮಗ್ಗ-ಜವಳಿ ಇಲಾಖೆ, ಹೇಮಾವತಿ ನಾಲಾ, ಪಶು ಪಾಲನೆ, ತುಮಕೂರು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ, ಸಿದ್ಧಗಂಗಾ ತಾಂತ್ರಿಕ ಸಂಸ್ಥೆ.

ಇಂಥ ವಸ್ತು ಪ್ರದರ್ಶನದ ಮೂಲಕ ಸ್ವದೇಶಿ ವಸ್ತುಗಳ ಬಳಕೆಗೆ ಪ್ರೋತ್ಸಾಹಸಿಗುತ್ತ
ಲಕ್ಷಾಂತರ ಮಂದಿ ಭೇಟಿ ನೀಡಿ ಇದರ ಲಾಭ ಪಡೆದಿದ್ದಾರೆ. ರಾಷ್ಟ್ರದ ಪ್ರ
ಮುಂಚೂಣಿಯಲ್ಲಿದೆ. ನೂತನ ವಿಚಾರಧಾರೆ ಯೊಂದಿಗೆ ಜನತೆಬದಲಾವಣೆಯಾಗಬ
ಈ ದಿಶೆಯಲ್ಲಿ ವಸ್ತು ಪ್ರದರ್ಶನ ತುಂಬಾ ಸಹಕಾರಿಯಾಗಿದೆ ಎಂದು ಹೇಳಿದರು

ಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಮಾತನಾಡಿ, ಇವರು ಜೀವಂತ ದೇವ
ಉದಾತ್ತ ಧ್ಯೇಯಗಳನ್ನು ಹೊಂದಿದ್ದಾರೆ. ಅವರನ್ನು ನಾವು ಎಲ್ಲಾ ಕಾಲ
ಅನುಸರಿಸಬೇಕು. ದೇಶ ವಿದೇಶಗಳಿಂದ ಬಹಳ ಮಂದಿ ಶ್ರೀ ಮಠಕ್ಕೆ ಭೇಟಿ ನೀ
ತ್ತಿದ್ದಾರೆ. ಇಲ್ಲಿಯ ದಾಸೋಹ ಮಹಾಕಾರ್ಯಗಳು ವಿಶ್ವದಲ್ಲಿ ಎಲ್ಲಿಯೂ ಕಾಣ
ಸಾಧ್ಯವಿಲ್ಲ. ಬೌದ್ಧಿಕ ವಿಚಾರಗಳಿಗಿಂತ ಆಧ್ಯಾತ್ಮಿಕತೆ ಬೆಳೆಯಬೇಕು. ಮಾನ
ನೆಮ್ಮದಿ ಶಾಂತಿ ಬೇಕು. ದೇಹ-ಮನಸ್ಸು ಸ್ವಚ್ಛವಾಗಿರಬೇಕು. ಇಲ್ಲಿಯ ಪ್ರಸ
ಬೆವರು ಸುರಿಸಿ ಬಂದದ್ದು. ಕ್ರಿಯಾಶೀಲತೆಗೆ ಇಲ್ಲಿ ಹೆಚ್ಚು ಒತ್ತು ನೀಡಿ
ನಿರಂತರ ಶ್ರಮದಿಂದ ಶ್ರೀಗಳು ಬೃಹತ್ ಮಠ ಕಟ್ಟಿದ್ದಾರೆ. ಇಂಥಹ ಮಹಾಜೀವಿ
ಮಾರ್ಗದರ್ಶನದಲ್ಲಿ ರಾಷ್ಟ್ರ ಸಮಗ್ರ ಬೆಳವಣಿಗೆಯನ್ನು ಹೊಂದುತ್ತದೆ. ಎಲ್ಲ
ಭೂಮಿಗೆ ಹೊರೆಯಾಗದೆ ಹೂವಾಗಿ ಬದುಕಬೇಕೆಂದು ಆಶಿಸಿದರು.

**ಶ್ರೀ ಶ್ರೀ ಗಳವರ ಆಶೀರ್ವಚನ :-**

ಮನುಕುಲದ ಉದ್ಧಾರಕ್ಕೆ ಭರತ ಖಂಡದ ಕೊಡುಗೆ ಅಪಾರ. ಕಳೆದುಕೊ
ಸ್ವಾತಂತ್ರ್ಯ ಮತ್ತೆ ಲಭಿಸಲು ಗಾಂಧೀಜಿಯವರಂಥ ರಾಷ್ಟ್ರ ಪ್ರೇಮಿಗಳು ಹೋರಾ
ಮಾಡಿದ್ದಾರೆ. ಆದರೆ ದೇಶ ಅನೇಕ ಸಮಸ್ಯೆಗಳಿಗೆ ಒಳಗಾಗಿದೆ. ಅನಕ್ಷರತೆ, ಅಜ್ಞಾ
ಬಡತನ ಕಡಿಮೆಯಾಗಿಲ್ಲ. ಪ್ರಜಾಪ್ರಭುತ್ವ ಯಶಸ್ವಿಯಾಗಲು ಎಲ್ಲರ ಜವಾಬ್ದಾ
ಇದೆ. ನಮ್ಮ ಭಾರತ ಎಲ್ಲಾ ಸಂಪನ್ಮೂಲ ಹೊಂದಿದೆ. ಆದರೆ ರಾಷ್ಟ್ರ ಪ್ರೇಮವಿ
ನಮ್ಮಲ್ಲಿ ಸ್ವಾಭಿಮಾನ ಬೆಳೆಯಬೇಕು. ಪ್ರಸ್ತುತ ಆಧ್ಯಾತ್ಮಿಕ ಚಿಂತನೆ ಮುಖ
ಇದಕ್ಕೆ ಕೇಂದ್ರ ಭರತ ಖಂಡ. ಇಂದು ಸ್ವಾರ್ಥಪರಾಕಷ್ಠೆ ಮುಟ್ಟಿದೆ. ಸಮಾನತೆ
ಧೋರಣೆ ಆತ್ಮೀಯ ಭಾವನೆಯಿಂದ ಬೆಳೆಯ ಬೇಕು ಎಂದು ಹೇಳಿದರು.

ವಸ್ತು ಪ್ರದರ್ಶನದ ಬಗ್ಗೆ ಪ್ರಸ್ತಾಪಿಸಿ ಗ್ರಾಮೀಣ ಬಂಧುಗಳು ತಮ್ಮ ವೃ
ಬಗ್ಗೆ ಹೊಸ ಮಾರ್ಗಗಳನ್ನು ಅನುಸರಿಸಬೇಕು. ಈ ಬಗ್ಗೆ ಕೃಷಿ ಇಲಾಖೆ ಬಹಳವಾ
ಶ್ರಮಿಸಿ ಬೆಳಕು ಚೆಲ್ಲಿದೆ. ಗೃಹ ಕೈಗಾರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಬೇಕ
ಸಣ್ಣ ಪ್ರಮಾಣದಿಂದ ವಸ್ತು ಪ್ರದರ್ಶನ ಈ ಹಂತ ಮುಟ್ಟಿದೆ. ಅಧಿಕಾರಿಗಳು ಇದ
ಯಶಸ್ಸಿಗಾಗಿ ಬಹಳವಾಗಿ ಶ್ರಮಿಸಿದ್ದಾರೆ. ಅವರ ಶ್ರಮ ಸಾರ್ಥಕತೆ ಪಡೆದಿ
ಖಾಸಗಿ ಸಂಘ ಸಂಸ್ಥೆಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿರುವುದು ಪ್ರಗ
ಸೂಚಕವಾಗಿದೆ. ವಸ್ತು ಪ್ರದರ್ಶನ ವ್ಯವಸ್ಥೆಯಲ್ಲಿ ಶ್ರೀ ಮಠದ ಹಳೆಯ ವಿದ್ಯಾರ್ಥಿ
ಗಳು ಮತ್ತು ಶಿಕ್ಷಕರು ನೆರವಾಗುತ್ತಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಪ್ರಾರಂಭಕ್ಕೆ ಎಂ. ಮಲ್ಲಿಕಾರ್ಜುನಯ್ಯ ಸ್ವಾಗತ ಕೋರಿದರು. ಬಿ. ವೀರಭದ್ರಯ
ವರದಿ ಓದಿದರು. ಎಸ್.ಸಿ. ಚಂದ್ರಶೇಖರಯ್ಯ ವಂದನೆ ಸಲ್ಲಿಸಿದರು. ಜಿ. ಕುಮಾರ
ಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

## ಸಿದ್ಧಗಂಗಾ ಮಾಸಿಕ ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ.

ಫಾರ್ಮ 4

| | | |
|---|---|---|
| 1. | ಪ್ರಕಟಣೆಯ ಸ್ಥಳ | ಶ್ರೀ ಸಿದ್ಧಗಂಗಾ ಮಠ |
| 2. | ಪ್ರಕಟವಾಗುವ ಅವಧಿ | ಮಾಸಿಕ |
| 3. | ಮುದ್ರಣ ಭಾಷೆ | ಕನ್ನಡ |
| 4. | ಮುದ್ರಕರ ಹೆಸರು | ಶ್ರೀ ಶ್ರೀ ಶಿವಕುಮಾರಸ್ವಾಮಿಗಳು |
| | ರಾಷ್ಟ್ರೀಯತೆ | ಭಾರತೀಯ |
| | ವಿಳಾಸ | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲೆ (ಕರ್ನಾಟಕ) |
| 5. | ಪ್ರಕಾಶಕರ ಹೆಸರು | ಹೆಚ್. ಬಿ. ಗಂಗಾಧರಯ್ಯ |
| | ರಾಷ್ಟ್ರೀಯತೆ | ಭಾರತೀಯ |
| | ವಿಳಾಸ | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲೆ (ಕರ್ನಾಟಕ) |
| 6. | ಸಂಪಾದಕರು | ಶ್ರೀ ಪಂ॥ ಚನ್ನಪ್ಪ ಎರೆಸೀಮೆ |
| | ರಾಷ್ಟ್ರೀಯತೆ | ಭಾರತೀಯ |
| | ವಿಳಾಸ | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲೆ (ಕರ್ನಾಟಕ) |
| 7. | ಪತ್ರಿಕೆಯ ಮಾಲೀಕರು | ಶ್ರೀ ಶ್ರೀ ಶಿವಕುಮಾರಸ್ವಾಮಿಗಳು<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲೆ (ಕರ್ನಾಟಕ) |
| 8. | ನೊಂದಣಿ ಸಂಖ್ಯೆ | K. R. N Q. 9<br>17139/69 |

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

ಸಹಿ

1 ಮಾರ್ಚಿ 1995
ಸಿದ್ಧಗಂಗಾ ಮಠ

ಹೆಚ್. ಬಿ. ಗಂಗಾಧರಯ್ಯ,
ಪ್ರಕಾಶಕರು.

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,

ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ
**8597, 2373, 2577**







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.
ದೂರವಾಣಿ : **8077**



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ : **2677**



**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.
ದೂರವಾಣಿ : **2077**

ಸ್ಥಾಪನೆ : 1943 ತಂತಿ : 'ವೀರಶೈವ

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62 ಕೇಂದ್ರ ಕಛೇರಿ : { 7286
7020

ಮಿನಿ ಬಜಾರ್: 3511

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದ
ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 7.08 ಲ
ಸರ್ಕಾರದಿಂದ ರೂ. 13-42 ಲ
ಒಟ್ಟು ರೂ. 20.50 ಲ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸ
ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯ
ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮುಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ.ತೋಟದಪ್ಪನವರು
ಉಪಾಧ್ಯಕ್ಷರು
–: ನಿರ್ದೇಶಕರು :–
3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶೀ ವೈ. ಟಿ. ಮಹದೇವಪ್ಪನವರು
5) ಶೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್
13) ಶ್ರೀಮತಿ ಟಿ. ಕೆಂಪಮ್ಮನವರು
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯ



7 ಫೆಬ್ರವರಿ 95 ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆಯಲ್ಲಿ 31ನೇ ಕೃಷಿ_
ೈಗಾರಿಕಾ ವಸ್ತು ಪ್ರದರ್ಶನವನ್ನು ಕಂದಾಯ ಸಚಿವ ಶ್ರೀ ಆರ್. ಎಲ್. ಜಾಲಪ್ಪ
ನವರು ಉದ್ಘಾಟನೆಮಾಡಿ ಮಾತನಾಡುತ್ತಿರುವುದು. ಶ್ರೀ ಶ್ರೀಗಳೊಂದಿಗೆ ಶಾಸಕ
ಶ್ರೀ ಎಸ್. ಶಿವಣ್ಣ, ರೇಷ್ಮೆಖಾತೆ ರಾಜ್ಯಸಚಿವ ಶ್ರೀ ಡಿ. ನಾಗರಾಜಯ್ಯ
ುತ್ತು ಮಾಜಿ ಸಚಿವ ಶ್ರೀ ಲಕ್ಷ್ಮೀನರಸಿಂಹಯ್ಯನವರನ್ನು ಚಿತ್ರದಲ್ಲಿ ಕಾಣಬಹುದು.



ೆಬ್ರವರಿ–95 31ನೇ ಕೃಷಿ-ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾ-
ಭದಲ್ಲಿ ರಾಜ್ಯ ಉನ್ನತ ಶಿಕ್ಷಣ ಸಚಿವರಾದ ಶ್ರೀ ಡಿ. ಮಂಜುನಾಥ್ ಸಮಾರೋಪ
ಭಾಷಣ ಮಾಡುತ್ತಿದ್ದಾರೆ. ಶ್ರೀ ಶ್ರೀಗಳವರೊಂದಿಗೆ ಮಳಿಗೆಗಳಿಗೆ ಬಹುಮಾನ
ವಿತರಣೆ ಮಾಡಿದ ಲೋಕಸಭಾ ಉಪ ಸಭಾಪತಿಗಳಾದ ಶ್ರೀ ಎಸ್. ಮಲ್ಲಿಕಾ-
ರ್ಜುನಯ್ಯ ಮತ್ತು ತುಮಕೂರು ಜಿಲ್ಲಾ ಪರಿಷತ್ ಕಾರ್ಯದರ್ಶಿಗಳಾದ
ಶ್ರೀ ರಾಕೇಶ್ ಸಿಂಗ್ ಇವರನ್ನು ಚಿತ್ರದಲ್ಲಿ ಕಾಣಬಹುದು.



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.